**ಉರುಳಿಹಕ್ಕಿ** (ನಾ). ಒಂದು ಬಗೆಯ ಹಕ್ಕಿ: ಮರದ ಎಲೆಗಳಲ್ಲಿ ಕುಳಿತಿದ್ದ ಕೆಲವು ಉರುಳಿಹಕ್ಕಿಗಳು ಕಿರುದನಿಗೈಯುತ್ತ ಹಾರಿ ಹೋದುವು (ಕಾನೂರು. ೮೪). [ಉರುಳ್ಳಿ$_3$ + ಹಕ್ಕಿ$_1$ (< ಪಕ್ಕಿ$_1$)]

**ಉರುಳ್ಳು$_1$** 'ಉರುಳ್$_1$' ನೋ.

**ಉರುಳ್ಳು$_2$** (ನಾ). ಉರುಳುವಿಕೆ; ಸುತ್ತುವಿಕೆ: ಗಾಡಿ ಎರಡುರುಳಾಗಿ ಬಿದ್ದಿತು (ರೂಢಿ). [< ಉರುಳ್$_1$]

**ಉರುಳ್ಳು$_3$** 'ಉರಿಲ್' ನೋ.

**ಉರುಳುಕ** (ನಾ). ಉರುಳಿಕೊಂಡು ಹೋಗುವವನು; ಅಸ್ಥಿರನಾದವನು; ಚಂಚಲನಾದವನು: ಅರಸನಲ್ಲಾ ದ್ರುಮನು ವರ ಕಿಂಪುರುಷ ಮಾನ್ಯನು ನಿಮ್ಮಯಜ್ಞದೊಳುರುಳುಕರಿಗಲ್ಲದೆ ವಿಶಿಷ್ಟರಿಗಿಲ್ಲ ಗತಿಯೆಂದ (ಕುವ್ಯಾಸ. ೮–೨೩). [ಉರುಳು + -ಕ$_3$]

**ಉರುಳುಗಡಿ** (ಕ್ರಿ). ಉರುಳುವಂತೆ ಕಡಿ, —ಕತ್ತರಿಸು: ಮುರನ ನರಕನ ಹಂಸ ಡಿಬಿಕರ ಶಿರವ ನೆಱೆಚಂಡಾಡಿ ಲೀಲೆಯಲುರುಳುಗಡಿದಪನವನಿಭಾರವ (ನಿಭಾಗ. ೨–೩–೨೮); ದಿವಿಜರಂ ದೆಸೆದೆಸೆಯೊಳು ಉರುಳುಗಡಿವಂ ವೀರನೊಲವಿನಿಂ ಗೆಲವಿನಿಂ ತೆರಳದವನೊಡನೆಸೆವನುಬ್ಬಿನಿಂ ಕೊಬ್ಬಿನಿಂ (ಚೆಬಪು. ೫೦–೩೬).

[ಉರುಳು$_1$ (< ಉರುಳ್$_1$) + ಕಡಿ$_2$]

**ಉರುಳುಗಣ್ಣಿ** 'ಉರುಳ್ಗಣ್ಣಿ' ನೋ.

**ಉರುಳುಗಳ್ಳ** (ನಾ). ಸಮಯಕ್ಕೆ ತಕ್ಕಂತೆ ಕಳ್ಳತನ ಮಾಡುವವನು (?): ಹುಟ್ಟದ ಮರ ನೆಟ್ಟ ಕಲ್ಲು ಮತ್ತೇತರ ಇಷ್ಟದಲ್ಲಿ ಒತ್ತಿದ ಲಿಂಗಮುದ್ರೆ ಇರಲಿಕೆ ಕಿತ್ತುಕೊಂಡವ ದ್ರೋಹಿ ಎಂಬರು ದೃಷ್ಟದಲ್ಲಿ ಜಂಗಮಭಕ್ತರ ಕೊಲುತ್ತ ಇಂತೀ ಉರುಳುಗಳ್ಳರ ಭಕ್ತರು ಜಂಗಮವೆಂದರೆ ಒಪ್ಪನಯ್ಯ (ಶೂನ್ಯಸಂ. ೨೬೫–೨೦).

[ಉರುಳು$_1$ (< ಉರುಳ್$_1$) + ಕಳ್ಳ]

**ಉರುಳುಗೆಡಹು** (ಕ್ರಿ). = ಉರುಳಿಸು: ಕೆರಳಿ ಬಳಿಕವನಸ್ತ್ರಶಸ್ತ್ರವ ಸರಗೊಳಿಸಿ ಸವ್ಯಾಪಸವ್ಯದಲುರುಳುಗೆಡಹಿದ ನೂಕುವತಿಬಲ ವೀರವಾನರರ (ತೊರರಾ. ೬–೩೦–೩೨).

[ಉರುಳು$_1$ (< ಉರುಳ್$_1$) + ಕೆಡಹು (< ಕೆಡಪು)]

**ಉರುಳುಗೆಡ್ಡೆ** (ನಾ). ದುಂಡಾದ ಗೆಡ್ಡೆ; ಆಲೂಗೆಡ್ಡೆ: ಕರಿದ ಉರುಳುಗೆಡ್ಡೆ ಮೊದಲಾದುವುಗಳ ತೆಳ್ಳನೆಯ ಬಿಲ್ಲೆಗಳು; ಉಪ್ಪೇರಿ (Chip. ಇಂಕನಿ). [ಉರುಳು$_1$ (< ಉರುಳ್$_1$) + ಗೆಡ್ಡೆ]

**ಉರುಳುನೂಕು** (ಕ್ರಿ). ಉರುಳುವಂತೆ ನೂಕು, —ತಳ್ಳು: ಕೃಷ್ಣನ ಚರಿತವನು ಕೇಳುತ್ತ ಕಾಲವನುರುಳುನೂಕಲುಬೇಹುದು (ನಿಭಾಗ. ೧೦–೯೫–೫). [ಉರುಳು$_1$ (< ಉರುಳ್$_1$) + ನೂಕು$_1$]

**ಉರುಳುಬೇಟೆ** (ನಾ). ಕೊರಳಿಗೆ ಉರುಲು ಹಾಕಿ ಪ್ರಾಣಿಯನ್ನು ಹಿಡಿಯುವ ಬೇಟೆ: ಹಕ್ಕಿಬೇಟೆ, ಮೀನುಬೇಟೆ, ಉರುಳುಬೇಟೆ ಮೊದಲಾದುವುಗಳಲ್ಲಿ ಸಹಾಯಕನಾಗಿದ್ದದ್ದೆ (ಮಲೆಮ. ೧೩೪).

[ಉರುಳು$_3$ (< ಉರಿಲ್) + ಬೇಟೆ]

**ಉರುಳುಸೇವೆ** (ನಾ). (ಹರಕೆ ಹೊತ್ತು ಒದ್ದೆಯನ್ನುಟ್ಟು ದೇವಸ್ಥಾನದ ಸುತ್ತಲೂ) ಉರುಳುವ ಪ್ರದಕ್ಷಿಣೆ; ದಿಂಡುರುಳು: ಒದ್ದೆವಸ್ತ್ರದಿಂದ ಉರುಳುಸೇವೆ ಮಾಡುವರು (ಹುಟ್ಟಹ. ೧೬೪); ಸೂರ್ಯನ ಸುತ್ತಲೂ ಉರುಳುಸೇವೆಯನ್ನು ಮಾಡುತ್ತಿರುವುದು (ಜ್ಯೋತಿರ್ವಿ. ೧೨); ಈಗ ದೇವರು ಯಾರು, ಯಾವ ದೇವರ ಹಿಂದೆ ಇಂಥ ಪರೆದಾಟ ಈ ಉರುಳು ಸೇವೆ? (ನಡೆದಾ. I, ೩೭೨).

[ಉರುಳು$_1$ (< ಉರುಳ್$_1$) + ಸೇವೆ]

**ಉರುಳೆ** 'ಉರುಳಿ$_1$' ನೋ.

**ಉರುಳೆವರಿ** (ಕ್ರಿ). ಉರುಳಿಕೊಂಡು ಮುಂದಕ್ಕೆ ಹೋಗು: ನೀರೊಳಗಣ ಪೆಣನಂತೆವೊಲಾರೆಱೆದೊಡಮುರುಳೆವರಿದು ಪುರುಳಿಲ್ಲದಹಂಕಾರದೊಳೆ ಬಾತು ಬಲ್ಮೆಗೆ ಹಾರೈಸುವರೇಕೆ ಬಯಕೆಗವಿಗಳ್ (ಲೀಲಾವ. ೧–೨೪). [ಉರುಳೆ (< ಉರುಳಿ$_1$) + ಪರಿ$_2$]

**ಉರುಳೆವಲಸು** (ನಾ). ದುಂಡಾದ ಹಲಸಿನಕಾಯಿ; ಅಡಿಗೆ ಹಲಸು: ಉರುಳೆವಲಸಿನ ಕಾಯ ಕೆತ್ತಿ ಬೇಯಿಸಿಕೊಂಡು ಹಿರಿದಾಗಿ ಮುಳ್ಳಿಱಿದು ಮೊಸರು ಮಜ್ಜಿಗೆಯ ಹಾಲರಿಸಿನಕೆ ಕೂಡಿ (ಸೂಪಶಾ. ೫–೪೫).

[ಉರುಳೆ (< ಉರುಳಿ$_1$) + ಪಲಸು]

**ಉರುಳೆವಾಯ್** (ಕ್ರಿ). ಉರುಳಿಕೊಂಡು ಮುನ್ನುಗ್ಗು: ಬೊಬ್ಬಿಱಿದು ಪರಿವಬ್ಬರಗಲಿಗಳುಮಂ ನೆರವಿಯುಸುರುಳೆವಾಯ್ದುಗುರ್ವಿಸಿ ಪರಿವ ಕರ್ಬುಸುಗಲಿಗಳುಮಂ (ಲೀಲಾವ. ೫–೧೩೩ ವ).

[ಉರುಳೆ (< ಉರುಳಿ$_1$) + ಪಾಯ್$_1$]

**ಉರುಳೊಡ್ಡು** 'ಉರುಲೊಡ್ಡು' ನೋ.

**ಉರುಳ್ಗಣೆ** (ನಾ). ಕುಣಿಕೆಯುಳ್ಳ ಹಗ್ಗದಿಂದ ಕೂಡಿದ ಕೋಲು; ಪಾಶವಿರುವ ಗಣೆ: ಬಾಣನಂದನೆಯೆಂಬ ತಡಿಕೆಯ ಮಱೆಯ ಸುಜಾಣ ಮನ್ಮಥನುರುಳ್ಗಣೆಯ ಕೇಣವಿಲ್ಲದೆ ನೀಡಿ ಸುರರೆರ್ದೆಯೊಳಗಿರ್ದ ಪ್ರಾಣಹಂಸಗಳ ಬಂಧಿಸಿದ (ಮೋಹತ. ೨೫–೧೬).

[ಉರುಳ್$_3$ (< ಉರಿಲ್) + ಗಣೆ (< ಗಱೆ)]

**ಉರುಳ್ಗಣ್ಣಿ, ಉರುಳುಗಣ್ಣಿ** (ನಾ). ಉರುಳಿನಿಂದ ಕೂಡಿದ ಹಗ್ಗದ ಕುಣಿಕೆ; ಉರುಳುಪಾಶ: ಕೈಗತ್ತರಿಯುರುಳ್ಗಣ್ಣಿ ಬಲ್ಗುಂಡು ಪೆರ್ದೊಣೆ (ಪದ್ಮರಾ. ೩–೨೧); ಚಲ್ಲಗಣ್ಣಡೆಯ ಕುಡಿವೆಳಗೆಂಬುರುಳ್ಗಣ್ಣಿಯಲ್ಲಿ ಪಥಿಕಮನೋಮೃಗವನೆಯ್ದೆಬೀಱಿ ತಂದಿಲ್ಲಿ ತಡೆವರಿವಳ್ದಿರೇಂ ವ್ಯಾಧವಧುಗಳೋ ಮೇಣ್ ಪ್ರಪಾವಧುಗಳೋಯೆನೆ (ಪದ್ಮರಾ. ೮–೯). **ಉರುಳುಗಣ್ಣಿ**: ಮರುಳಹರೆ ಭೂಪಾಲ ಬಾದರಾಯಣನಿಕ್ಕಿದುರುಳುಗಣ್ಣಿ [ಪಾಠಾಂ. ಉರಿಲಕಣ್ಣಿ]ಗೆ ಸಿಲುಕುವರೆ (ಜೈಮಿಭಾ. ೨–೫೭).

[ಉರುಳ್$_3$ (< ಉರಿಲ್) + ಕಣ್ಣಿ]

**ಉರುಳ್ಗೊನೆ** 'ಉರುಲ್ಗೊಲೆ' ನೋ.

**ಉರುಳ್ಚಿಸು** (ಕ್ರಿ). ಉರುಳಿಸು; ಬೀಳಿಸು: ಮೇರುನಗಕ್ಕೆಳದುಯ್ದು ಮೇಗಣಿಂ ಕೂಡಿ ಸಮಂತುರುಳ್ಚಿಸನೆ... ಅಗುರ್ವಿಸಲೆನ್ನ ವಿದ್ಯೆಯಿಂ (ಧರ್ಮಾಮೃ. ೯–೧೮೦). [ಉರುಳ್ಚು + -ಇಸು$_3$]

**ಉರುಳ್ಚು, ಉರುಳಿಚು** (ಕ್ರಿ). ಉರುಳುವಂತೆ ಮಾಡು; ಬೀಳಿಸು: "ಉರುಳ್ಚು–ನಿಮ್ನಾಗಮನಕರಣೇ" (ಶಮುಧಾ); ಉರುಳ್ಚಿ ಪೂವಿನ ಪಸೆಯೊಳ್ ಪೊರಳ್ಚಿದನಳುರ್ಕೆಯ ಬರ್ದೆಯರಂ ಗುಣಾರ್ಣವಂ (ಪಂಪಭಾ. ೨–೪೦); ಅದಿರೆ ವಳಿತ್ರಯ ಸೋಪಾನದೊಳೋವದುರುಳ್ಚಿ... ಪುಡುಕು ನೀರಱ್ದಿದನಬ್ಜೇಕ್ಷಣನ ಚಿತ್ತಮುಂ ಚಿತ್ತಭವಂ (ವರ್ಧಪು. ೬–೯); ಕೊಂಡು ಬಲೀಂದ್ರನನುರುಳ್ಚಿ ಕಟ್ಟಿದ ಮುಕುಂದನೇಂ ಕೇವಲಮೇ (ಜಗವಿ. ೮–೮೯); ಹಾಸಂಗಿಯಂ ಪಚ್ಚೆಯ ವಿದೂಷಕನುರುಳ್ಚಿದಂ ಬಾಲೆಯರ ಮಚ್ಚಿಸುವ ಕಟಕಿವಾತುಗಳ ಜಾಣ್ಮೆಗಳಿಂದೆ ಪಗಡೆಯಾಡುವ ನೆವದೊಳು (ಜೈಮಿಭಾ. ೬–೩೧). **ಉರುಳಿಚು**: ಚಾಮಿಾಕರದ ಚಟುಳಪ್ರಭೆಯ ಕೋಟಿಯನುರುಳಿಚಿದರ್ (ತೊರರಾ. ೬–೧೧–೧೫). [ಉರುಳ್$_1$ + -ಚು]

**ಉರುಳ್ವಲೆ, ಉರುಲುವಲೆ** (ನಾ). ಉರುಳುಹಾಕುವ ಬಲೆ; ಒಂದು ಬಗೆಯ ಬಲೆ: ಕಣ್ಣವಲೆಗಳುರುಳ್ವಲೆ ಕಿಱುವಲೆ ಕಾಲ್ಕಣ್ಣವಲೆಗಳಂಟು ಕಣೆಯಿಂ ಬಣ್ಣಗೆಡಿಸಿ (ಅನಂಚ. ೧೨–೧೨೯). **ಉರುಲುವಲೆ**: ಗಕ್ಕನೆ ನಾಲ್ದೆಸೆಗೆವುರುಲುವಲೆ ತೊಡಕುವಲೆ ಸಿಕ್ಕುವಲೆ ಸಿಡಿಲುವಲೆ (ನವನೋ ೧೬–೨೦). [ಉರುಳ್$_1$ (< ಉರಿಲ್) + ಬಲೆ$_1$]

**ಉರ್ಶೆ$_1$** 'ಉಱಿ' ನೋ.

**ಉರ್ಕೈ** (ನಾ). (?) : ತೇಜನನಱಯದೆ ಭಂಗಮನಿಕ್ಕಿಯುಂ ಮೂಱಡೆಗಲ್ಲದೆ ಕಟ್ಟಾಡಿಯುಂ ಮುಱಯೆ ಪೊಯಿಸಿದನುರೆ[ಪಾಠಾಂ. ಅರೆ]ಯಂ ಕೊನ್ದು ಧರೆಗೆಡೆ ತರ್ಗರ್ಗಡಯಿವನೆನಿಸದೆ ನೆಱಯೆ ಕಡು ಜಾಣನೆನಿಸಲ್ಕೆ ಬಕ್ಕಿರ್ಕಮೆ (ಎಕ. II, ೧೩೩–೧೪೧ ; 987). [?]

**ಉರೋಜ** (ನಾ). ಮೊಲೆ ; ಸ್ತನ : ಚೆಲ್ವಿಂ ಪುದಿದುರಚಲ್ಲಿಯೊಳೆಸೆದುದು ತದುರೋಜಸರೋಜಮುಕುಳಯುಗಸಂಚಳನಂ (ಆದಿಪು. ೬–೧೯); ಉರೋಜದೊಳ್ ತಳೆದ ಕುಂಕುಮಲೇಪನಮಂದವೀಯೆ (ರಾಜಶೇ. ೪–೧೦). [ಸಂ.]

**ಉರೋರುಹ** (ನಾ). = ಉರೋಜ : ಸ್ಫುರದೀಷತ್ಪ್ರೋದ್ಗತೋರೋರುಹಮುಕುಳೆಯರುನ್ಮತ್ತಹಂಸೀಕ್ಷಣನ್ನೂಪುರೆಯರ್ (ಆದಿಪು. ೮–೫೬) ; ಏಳಿಸೆ ಪುರ್ವು ದೂರ್ವೆಯನುರೋರುಹಮುಜ್ಜ್ವಲ ಕುಂಭಶೋಭೆಯಂ (ಚಂದ್ರಪು. ೧೦–೫). [ಸಂ.]

**ಉರ್ಕಂದೆ** (?) : ಈ ಭೂಮಿಗಳಿಗೆ ವುಳ್ಳ ಕರೆ ಮುರೆ ಮನೆ ಬಾವಿ ಹಲಸು ಮಾವು ಸುಂಬೆ ನಿಕ್ಕಿಲುರ್ಕಂದ್ದೆ ಕದಿರು ಜಲ ಪಾಷಾಣ ಸಹ ಮೂಲಾಧಾರೆಯನು ಯೆರೆದು ಕೊಟ್ಟು ಯಿಸಿಕೊಂಬ ದೊಡ್ಡವರಹಂ (ಎಇ. XX, ೮–೪೨ ; 1556). [?]

**ಉರ್ಕಣೆಗಾಮುಂಡ** (ನಾ). ಒಬ್ಬಾತನ ಹೆಸರು: ಮರವೂರ ಉರ್ಕ್ಕಣೆ ಗಾಮುಣ್ಡರುಂ ಭೀಮುಗಾಮುಣ್ಡರುಂ (ಎಕ. XV, ಶ್ರೀರಂಗ. ೧೬೦–೧೯ ; 800). [ಉರ್ಕಣೆ₀ + ಗಾಮುಂಡ]

**ಉರ್ಕಳಿ** (ಕ್ರಿ). ಧೈರ್ಯಗುಂದು ; ಉತ್ಸಾಹ ಹೀನವಾಗು : ಇಳೆ ಕಾಯ್ವೆ ಪೋಱುದದಬ್ಧಿ ನೀರ್ದೆಗೆದುಪಾಶಾದಂತಿ ಬಾಯ್ವಿಟ್ಟುದುರ್ಕಳಿದರ್ ದಿಗ್ವರರಂಜಿದರ್ ದಿವಿಜರ್ . . . ಗ್ರೀಷ್ಮದೊಳ್ (ರಾಜಶೇ. ೫–೬೭). [ಉರ್ಕು₁ + ಅಳಿ₁ (< ಅಱು₁)]

**ಉರ್ಕಳಿಸು** (ಕ್ರಿ). ಅಹಂಕಾರ ಪಡು ; ಗರ್ವಿಸು : ಪಳನುಡಿ ಪಾರ್ವರ್ಗೆ ಉಪುವ ಖಳರಂ ಬೇರ್ಗಳೆದೆನೆನಗೆ ದೊರೆಯಿಲ್ಲೆಂದುರ್ಕಳಿಪರೆ (ಅಪ್ರತಿ. ೪೦–೧೩). [ಉರ್ಕಳ್₀ + -ಇಸು₃]

**ಉರ್ಕಾಳ್** (ನಾ). ಕೆಚ್ಚಿನ ಆಳು ; ಪರಾಕ್ರಮಿ ; ಶೂರ ; ಧೀರ : "ಉರ್ಕಾಳ್ . . . ಬಲ್ಪಂಟಂ – ಈ ೫ ಪರಾಕ್ರಮಮುಳ್ಳಂ" (ಕಶಸಾ. ೧೪–೨೬೪) ; "ಕೂರಾಳುರ್ಕಾಳೆಂದುಂ . . . ವೀರರ್ಗೆ ನಾಮಮುಕ್ಕುಂ" (ಕವಿಕಂ. ೧೨೬) ; ಒರ್ಕೆಯ್ಸಿ ಬಿಲ್ಲನಂಬುಮನುರ್ಕಾಳ್ಗಳ್ ಸುರಿಗೆಗಿಟ್ಟು . . . ಇಱದು (ಕಾವ್ಯಾವ. ೫೮) ; ಕಿರಾತರಾಜರ್ ತಮ್ಮಾಳ್ಗಳುಮನೊಳ್ಳಾಳುಮನುರ್ಕಾಳುಮನೊಡಗೊಂಡು ಬಂದು ಮುತ್ತಿದರಾಗಳ್ (ಜೀವಸಂ. ೫೮–೪೦) ; ಉರ್ಕಾಳ್ಗಳಾದೊಡೇಂ ಕೇಳ್ ಸೊರ್ಕಾನೆಯ ಕೈಯ ಕರ್ವನಿನಿತುಂ ಸೆಳೆಯಲ್ ಬರ್ಕುಮೆ (ಕಬ್ಬಿಕಾ. ೧೪೦). [ಉರ್ಕು₃ + ಆಳ್₃]

**ಉರ್ಕು₁, ಉಕ್ಕು₁, ಉರುಕು, ಉರ್ಗು₁** (ಕ್ರಿ). ೧. ಮೇಲಕ್ಕೆ ಉಬ್ಬು ; ಹೊಮ್ಮಿಬರು ; ಹಿಗ್ಗು : ನಿನ್ನ ಮೆಯ್ಯ ನೆತ್ತರ್ ಕುದಿದುರ್ಕಿಸಾವ ಬಗೆಯಿಂ ಸೆಣಸಲ್ ಬಗೆ ಬಂದುದಾಗದೇ (ಪಂಪಭಾ. ೯–೫೦) ; ಗದ್ಗದಂ ಸುಳಿಗೊಳುತ್ತಿರೆ ಕಂಪನಮುರ್ಕಿ ಲೀಲೆಯೊತ್ತರಿಸುತಿರಲ್ (ಪಂಪಾಶ. ೬) ; ಸ್ತಿಮಿತತೆವಡೆದಿರ್ದ ಕಡಲ್ ಸಮೀರಣನಿನುರ್ಕುವಂತೆ (ಚಿಕವಿ. ೪–೬೦). ೨. ಪರಾಕ್ರಮವನ್ನು ತೋರು ; ಉತ್ಸಾಹಿಸು : ಲಂಕೆಯಂ ಬನಮನಾಟಂದುರ್ಕಿ ಕಿಚ್ಚಿಕ್ಕಿ ಸಂತಸಮಂ ಸೀತೆಗೆ ಮಾಡಿ (ಪಂಪಭಾ. ೮–೩೫). ೩. ಗರ್ವಿಸು ; ಕೊಬ್ಬು : "ಉರ್ಕು – ಔದ್ಧತ್ಯೇ (ಗರ್ವಿಸು) ಲೋಹಭೇದೇ ಚ" (ಶಮಧಾ) ; ಒಡೆಯರ ದೇವರೆಂದು ನಿನಗಿತ್ತೊಡೆ ಪಟ್ಟಮನುರ್ಕಿದಪ್ಪೆ (ಪಂಪಭಾ. ೪–೬) ; ಪುಸಿವರ್ಗಂ ಸಿತಗರ್ಗಂ ವಸುಧೇಶ್ವರ ಕೇಳ ಕುಡುವನುರ್ಕಿ ಕುಮಾರಂ (ಧರ್ಮಾಮೃ. ೨–೬೦).

**ಉಕ್ಕು₁** : ೧. ಮಹಾಪ್ರಳಯ ಜಳಧಿಗಳ್ ಮೇರೆದಪ್ಪಿ ಕವಿದು ಭವನಂಗಳೆಲ್ಲಮನೊಳಕೈಯಲುಕ್ಕಿದುವೆಂಬಂತಿಡಿದಡರೆಗೊಂಡು (ಕಾದಂಪೂ. ೮೭೨) ; ನಿಮಗೆ ಮಾಡಿದ ದಾನಮುಂ ಪಾಲುಕ್ಕಿಮ್ಮಡಿಸುವಂತೆ ಇಮ್ಮಡಿಯಕ್ಕುಂ (ಧರ್ಮಾಮೃ. ೧–೨೬) ; ಸಸಿಯ ಬರವಿಂಗುಕ್ಕುವಂಬುನಿಧಿಯಂತೆ (ಹಚಕಾ. ೧೪–೨೦) ; ಕಾಯ್ದು ತಾಮ್ರರಸವನುಕ್ಕುವೆಣ್ಣೆಯೆಱದು (ಸಾನಂಚ. ೬–೩೮) ; ಉಕ್ಕಿತೋ ವಿಲಯಾಬ್ಧಿಯೆನೆ ಸಾಲಿಕ್ಕಿ ನಡೆದುದು ಸೇನೆ (ಕುವ್ಯಾಕ. ೮–೨೫) ; ಗೃಹಸ್ಥರಲ್ಲಿ ಉಕ್ಕುತ್ತಿದ್ದ ಪುತ್ರಪ್ರೇಮ (ರಾಮಾನೆ. ೧೧೨). ೩. ರಕ್ಕಸಿಯರುಕ್ಕುವ ಮನಮನಱಯಲ್ಬಾರದು (ಪಂಚತಂ. ೧೫೬–೬) ; ಇನ್ನಿತ್ತಲುಕ್ಕಿ ಬಂದೊಡೆ ನಿನ್ನಾಣೆ ನರೇಂದ್ರ ಮಱದು ಬಂದೊಡೆ ಕೊಲ್ (ಧರ್ಮಾಮೃ. ೨–೪೬) ; ಕಡುಸಲುಗೆಯಿಂದುಕ್ಕಿ ನಲಿವಾಡುತುಂ (ಮೞರ. ೭೩); ಉಕ್ಕಿದಾತನ ಹೆಗಲು ಬೇವುದು (ಕುವ್ಯಾವಿ. ೪–೫೩) ; ಪಿರಿದುಂ ಗಂಡುಮಿಕ್ಕು ಮೆಯ್ಯಱಯದೇ ಮೇಲು ತಾಗಂ ನೋಡದುಕ್ಕುಸೊಕ್ಕಿಂ ಬೆಳೆದು ಜವ್ವನಂಬಡೆದು ಜೂದುಂಗಾಜನಾದೆಯಲ್ಲ (ಸಮ್ಯಕಾ. ೧೦–೮). **ಉರುಕು** : ೧. ಪರಾಕ್ರಮದ ದೇವಾಂತಕ ತ್ರಿಶಿರ ಪ್ರಸಿದ್ಧ ನರಾಂತಕ ಮಹೋದರರನು ಯುದ್ಧೋನ್ಮತ್ತರುರುಕಿದರು [ಪಾಠಾಂ. ಉಲುಕಿದರು, ಉರುಬಿದರು] (ತೊರರಾ. ೬–೩೯–೮). **ಉರ್ಗು₁** : ೧. ದುರ್ಗಮವದುರ್ಗಗೈದೆರ್ಗಿದರ ಕಾಯ್ದುದುಯೆದುರುರ್ಗಿದರ ಸ್ವರ್ಗನಿಳಯರ್ಗಿಸುತ ಮುರ್ಗಿಸುವ (ಜಿನಮು. ೩೨–೮). ೪. ಕೃಶವಾಗು : ವಿರೋಧಿನಾಯಕನಿಕಾಯಂ ಬಂದು ನಿಂಪಾಂತಡಾ ಬಲಮುಂ ಗಂಡುವದುರ್ಗ್ಗಿ ತಗ್ಗಿನೆಂದೊಲ್ ಮುಗ್ಗಲ್ (ಮುಂಬರಾ. X, ೨೪೫–೪೩ ; 1219).

**ಉಕ್ಕಬಿಡು** = ಹೊಮ್ಮಿ ಉಬ್ಬುವುದಕ್ಕೆ ಅವಕಾಶ ಕೊಡು : ಜೀರಿಗೆ ಮೆಂತೆಯದ ಚೂರ್ಣಮಿಕ್ಕಿ ಮುಚ್ಚಳನು ತೆಗೆಯದೆ ಉಕ್ಕಬಿಡದೆ ಚೆನ್ನಾಗಿ ಹದನಱದುಕ್ಕರಿಸಿಕೊಂಬುದು (ಸೂಪಶಾ. ೫–೮).

[ದೇ. ‖ ತುಳು. ಉಕ್ಕು, ಉರ್ಕು ; ತೆಲು. ಊರು ; ಗೊಂಡಿ. ಉರ್ಕುರ್ಪ ; ಕುಇ. ಉಂಗ್ ; ಬ್ರಾಹೂಇ. ಊರಿಂಗಿಂಗ್]

**ಉರ್ಕು₂** (ಕ್ರಿ). ಕರಗು ; ದ್ರವವಾಗು : ವರಗಂಧದ್ರವ್ಯಸಂದೋಹಮೆ ಜಿನತನುಗಂಧಕ್ಕೆ ಸೋಲ್ತಾದ ಲಜ್ಜಾಭರದಿಂ ನೀರಾಗಿ ತಾನುರ್ಕಿದುದೆನಿಸಿ (ಆದಿಪು. ೬–೧೦೨).

[ದೇ. ‖ ತಮಿ. ಮಲ. ಉರುಕು, ಉರುಕ್ಕು ; ತೆಲು. ಉಕ್ಕು]

**ಉರ್ಕು₃, ಉಕ್ಕು₂** (ನಾ). ೧. ಹಿಗ್ಗುವಿಕೆ ; ಉತ್ಸಾಹ ; ಏಳಿಗೆ ; ಹೊಮ್ಮಿ ಮೇಲಕ್ಕೆ ಬರುವಿಕೆ : ಕಡವಿನ ಕಂಪಡಂಗಿದುದು ಜಾದಿಯ ಕಂಪೊದವಿತ್ತು ಸೋಗೆಯುರ್ಕುಡುಗಿದುದಂಚೆಯುರ್ಕು ಪೊಸತಾಯ್ತು (ಪಂಪಭಾ. ೬–೭೯); ಪರಪಕ್ಷದೂಷಣಾಲೋಕನದುರ್ಕು ತರ್ಕದೊಳಭಿಜ್ಞತೆಯಾಗಮದೊಳ್ . . . ಆದುದು (ಅರ್ಹನೇ. ೨–೩೪) ; ಮದ ಯೌವನದುರ್ಕಂ ಸತ್ಕೌಘತೆಯೊದವಂ ತೋಱುತ್ತುಂ (ಜಯಕಾ. ೫–೪೬). ೨. ದರ್ಪ ; ಗರ್ವ : "ಉರ್ಕೆಂದು ಉಕ್ಕು ಗರ್ವಮುಮಕ್ಕು" (ಕಶಸಾ. ೫–೬೫) ; ಉರ್ಕುಂ ಕಂಪನಮುಂ ಮಂಡಲಾಗ್ರದೊಳ್ (ಎಇ. XIII, ೩೩೨–೪೩ ; 929); ಕಡುಗಲಿತನಮುಂ ಚಾಗದ ಪಡೆಮಾತುಂ ವಿದ್ಯೆಯುರ್ಕು ಮೊರ್ವನೊಳೆಂತುಂ ನಡೆಯವು (ಆದಿಪು. ೧೨–೧೦೪) ; ಆ ಪಾರ್ವನುರ್ಕಂ ಮುಱವೆನೆಂದು ನುಡಿದು (ಪದ್ಮರಾ. ೯–೨೩) ; ಕೊಲಲು ಮೆನ್ನಂ ಶಂಭುವೇ ಶಕ್ತನುರ್ಕಿನ ಮಾತಂ ಬಿಡು (ವೃಷವಿ. ೩೬–೪೧). ೩. ಬಲ ; ಸಾಮರ್ಥ್ಯ ; ಕೆಚ್ಚು : ಉರ್ವರೆಯ ತಮಮನೆಬ್ಬಿಟ್ಟುವರ್ಕ್ಕಂಗೆ ತೇಜಂ ತವದುರ್ಕ್ಕಂ ತಾಳ್ದಿ... ಪುಟ್ಟಿದಂ ನಾರಸಿಂಹಂ (ಎಕ. V, ಚಿನ್ನರಾ. ೨೪೩–೪೯ ; 1209); ಅಡವಿಗಿಚ್ಚಂ ಕೆಡಿಸಲೆಂದುಜ್ಜುಗಿಪ ತಜಗೆಲೆಗಳಂದದಂ ತಶನಿಯುರ್ಕಂ ನಿಲಿಸಲೆಂದೂಹಿಸುವ ಕುಧರ ನಿಕರದಂತೆ (ಪದ್ಮರಾ. ೬–೪).

**ಉಕ್ಕು₂** : ೧. ಕೋಪಿಸಲು ನಿಮಗದಲ್ತೆಂದೆಂದು ನಮಿಪರುಕ್ಕಿನ ದೊಂದು ಭಯಭಕ್ತಿಯಂ (ಸಾನಂಜ. ೨–೪೧) ; ಜಾನಪದದ ಏಳಿಗೆ ಯಾಗಬೇಕೆಂಬ ಕಾಲದಲ್ಲಿಲ್ಲ ವರ್ಣಕ ಸಾಹಿತ್ಯಕ್ಕೆ ಉಕ್ಕು ಹೆಚ್ಚು (ಸಾಹಿವಿ. ೧೦೪). ೨. ನಿನ್ನ ಮುನ್ನಿನ ಸೊಕ್ಕುಮುಕ್ಕು ವೆತ್ತಪೋದುದು (ಜಾವುಂಉ. ೧೬೦) ; ಪುರಜನಮಂ ಪರಿಜನಮಂ ಕರಮುಕ್ಕಿಂ ಪಿಡಿದು ತನ್ನ ಗೆಣೆಗಳ್ತಾನುಂ ಪರಿಭವಿಸಿ ಬಡಿಯಲರಸನುಮರಸಿಯುಮುಚ್ಚಿಕ್ಕರ್ತು ನೋಡುತಿರ್ಪರ್ ನಗುತುಂ (ಧರ್ಮಾಮೃ. ೨–೧೪) ; ರಕ್ಕಸರು ನಾವೆಂಬ ಭುಜಬಲದುಕ್ಕು ಮುಱಿದುದು (ತೊರರಾ. ೬–೧೯–೨) ; ಈಗ ನೀವೆರಡು ಖಂಡದ ಮ್ಲೇಚ್ಛದವರುಕ್ಕ ನೀಗಾಡಿತಹುದಿಲ್ಲಿಗೆಂದ (ಭರಜ. ೩೦–೩) ; ದೇವಾಧಿದೇವಾ ಮಹದೇವ ನೀನ್ ಮುರಿದೆ ಪಾರಸಿಕರುಕ್ಕನ್ (ಪಾರಸಿ. ೧೯–೨೧). ೩. ಖಳನಿಕ್ಕಿದ ಮರ್ದಿನ ತೀವ್ರಮಪ್ಪ ನಿಷ್ಠುರ ವಿಷದುಕ್ಕು ಪೋಗೆ (ಧರ್ಮಾಮೃ. ೧೧–೧೨೪). [< ಉರ್ಕು₁]

**ಉರ್ಕು₄, ಉಕ್ಕು₃** (ನಾ). ಹದಮಾಡಿದ ಕಬ್ಬಿಣ : "ಉರ್ಕು – ಔದ್ಧತ್ಯೇ (ಗರ್ವಿಸು), ಲೋಹಭೇದೇ ಚ" (ಶಮಧಾ) ; "ಉರ್ಕೆಂದು ಉಕ್ಕು ಗರ್ವಮುಮುಕ್ಕುಂ" (ಕಶಸಾ. ೫–೬೫) ; ಓದಿದೊಡೆ ಕಲ್ಲಮಾಲೆಯ ನಾದಂ ಕರ್ಬೊನ್ನ ಕಡಲೆ ಪಾದಿಸೆ ರಸಮಂ ಸೋದಿಸೆಯುಕ್ಕಿನ ಪುಡಿಯೆನಿಪಾ ದುಷ್ಕವಿತೆಗಳನೆಣಿಸಲೇಕೀ ಕೃತಿಯೊಳ್ (ಗಿರಿಕ. ೧–೨೨).

**ಉಕ್ಕು₃** : ಕಡುಗೂರಿತಕ್ಕುಮುಕ್ಕಿನೊಳೊಡಗೂಡಿದ ಪಚ್ಚೆ (ಗದಾಯು. ೩–೬೫) ; ಉಕ್ಕಿನಂತತಿನಿಷ್ಠುರನಾಗದೆ ಪಱಿಯ ಸೀರೆಯಂತೆ ಗುಣದೊಳ್ ನೂನಮಾಗದೆ (ಧರ್ಮಾಮೃ. ೫–೯೮ ವ) ; ಉಕ್ಕಿನುರುಳಿಯೊಳಿಡುವ ಖಂಡೆಯದಿಕ್ಕಡಿಯ ಛಾಯಗಳ (ಕುವ್ಯಾಭೀ. ೪–೬೫) ; ಭದ್ರಾವತಿ ಯಲ್ಲಿ ಕಬ್ಬಿಣ ಮತ್ತು ಉಕ್ಕಿನ ಕಾರ್ಖಾನೆ ಇದೆ (ರೂಢಿ).
[ದೇ. ‖ ತಮಿ. ಮಲ. ಉರುಕ್ಕು]

**ಉರ್ಕುಂದೊಱಿ, ಉಕ್ಕುಂದೊಱಿ, ಉರ್ಕುದೊಱಿ** (ನಾ). ಉಕ್ಕಿ ಹರಿಯುತ್ತಿರುವ ಹೊಳೆ; ತುಂಬುಹೊಳೆ: ಕಡುಕುಂದಱಿ, ಉರ್ಕುಂ ದೊಱಿ (ಶಮುದ. ೧೭೦ ಪ್ರಯೋ). **ಉಕ್ಕುಂದೊಱಿ** : ಆ ಗಿರಿಯ ಪಕ್ಕದೊಳ್ ತಮ್ಮ ಸೊಕ್ಕು ನೀರಿಂದೊದವಿದುಕ್ಕುಂದೊಱಿಯೊಳ್ (ವಿರೂಪಾ. ೩೦ ವ) ; ಪೆರ್ಮಡುವಿಡಿದು ಕಣ್ಗೆಸೆವ ಕೆಱೆಗಳ ಗಡಣದಿಂ ದುಕ್ಕುಂದೊಱಿಗಳಿಂದಾ ನಾಡು ಕಡುರಮ್ಯಮಾಗಿರುತಿಹುದು (ಕುರಾಸಾಂ. ೨–೭೨) ; ಉಕ್ಕುವುದು ತೊಱೆ, ಉಕ್ಕುಂದೊಱಿ (ಶಬ್ದಾನು. ೩೩೩ ಪ್ರಯೋ). **ಉರ್ಕುದೊಱಿ** : ತಳ್ಪಂಕಿಸದುರ್ಕುದೊಱಿಯೊಳು ಮೇರೆಯನುಲ್ಲಂಘಿಪ ಕಾಯ್ಪುಕಡಲಂತೆ (ಸೂಬಸೋ. ೧೩–೧೪).
[ಉರ್ಕು₁ + ತೊಱೆ₂]

**ಉರ್ಕುಗಾಳೆಗ** (ನಾ). ಪರಾಕ್ರಮದಿಂದ ಮಾಡುವ ಯುದ್ಧ, —ಕಾಳಗ : ರತ್ನಕಂಬಳದ ಉರ್ಕುಗಾಳೆಗದ ಜಟ್ಟಿಗರು, ವಾದಿಗಳು (ಚಿಟ್ಟಅ. ೩೨–೮). [ಉರ್ಕು₃ + ಕಾಳೆಗ]

**ಉರ್ಕುಗಿಡು** (ಕ್ರಿ). ಧೈರ್ಯಗುಂದು ; ಉತ್ಸಾಹಹೀನನಾಗು : ಪಾವಕನುರ್ಕುಗೆಟ್ಟಿದೆಂತುಮೊ ತೊದಳಾಯ್ತು ದಾನಮೆನೆ ಮಾರುತ ಬಾಣದೆ ಮೇಘಮಾಲಿಕಾನಿವಹಮನೆಚ್ಚು (ಪಂಪಭಾ. ೫–೧೬) ; ಬಗೆಯೆ ನಿಜದೇಹದನ್ನರ್ ಖಗನಾಯಕರಱಿದೊಡುರ್ಕುಗೆಟ್ಟನೆ ಮುನ್ನಿಂ ಮಿಗೆ ಕಡುಗೂರ್ಪಂ ತಳೆದಂ (ವರ್ಧಪು. ೮–೫೬) ; ಪಿಂಗಿದ ನೀಱರ ಬಲ್ಪು ಪಾಱಿ ಪಾದರಿಗರ ನಾಣ್ಗಳುರ್ಕುಗಿಡೆ ಬಲ್ಮೊಳಿಸಿಂದಂ ಆಗಲ್ಕೆ ವೆತ್ತ ನಲ್ಲರ ಬಗೆ ಬಳ್ಕೆ ಜೀವೊಡೆಯ ಬಲ್ಲುಲಿ ನೀಳ್ಪುದು ಕರ್ಪುವಿಲ್ಲನಾ (ಕಬ್ಬಿಕಾ. ೩೦೦). [ಉರ್ಕು₃ + ಕಿಡು (< ಕೆಡು)]

**ಉರ್ಕುಡಿ₁** (ಕ್ರಿ). ಗರ್ವ ಅಡಗು ; ಹೆಮ್ಮೆ, ಸೊಕ್ಕು ಮುರಿ. 'ಉರ್ಕುಡಿಸು' ಪರಾ. [ಉರ್ಕು₃ + ಉಡಿ₁]

**ಉರ್ಕುಡಿ₂** (ನಾ). ೧. ಗರ್ವವನ್ನು ಮುರಿಯುವುದು ; "ಗರ್ವ ಭಂಗ" (ಶಾಪಮಂ. ಕೋಶ) ; ಅರಿಯಂಗುರ್ಕುಡಿ ಬಲ್ಲಿದಂಗೆ ಘಟಸರ್ಪಂ ಗಂಡುದೋರ್ಪಂಗೆ ಮಾರಿ (ಎಕ. VII, ಶಿಕಾರಿ. ೧೫೧–೪೨; 1047) ; ಕಿಡಿಗಳ್ ಜಾತಿ ಜರಾದಿಗಳ್ಗೆ ದುರಘವ್ರಾತಾದಿಗಳ್ಗೆಳ್ದುರ್ಕುಡಿಗಳ್ ಪುಣ್ಯದ ಬೀಡು ಬಿಟ್ಟ ಗುಡಿಗಳ್ . . . ಗುಣಭದ್ರ ದೇವರಡಿಗಳ್ (ಕಾವ್ಯಾವ. ೮೯). ೨. (ಆಲಂ) ಪರಾಕ್ರಮಶಾಲಿ : ಅಡ್ಡಣಮೆಡ್ಡಮಾಗೆ ಮೂದಲಿಸಿ ಪೊಡರ್ಪು ಪೆರ್ಚಿ ಕೆಲರುರ್ಕುಡಿಗಳ್ ತಱಿಸಂದು ಕಾದಿದರ್ (ಕಬ್ಬಿಕಾ. ೨೭೨). 'ಬರ್ಕುಡಿ' ಪರಾ. [ಉರ್ಕು₃ + ಉಡಿ₄]

**ಉರ್ಕುಡಿಸು** (ಕ್ರಿ). ಗರ್ವವನ್ನು ಮುರಿ ; ಗರ್ವಭಂಗಮಾಡು : ಕಣ್ಣಡೆ ಕುಡಿಮಿಂಚನುರ್ಕುಡಿಯಲಾರ್ಪುದು ಬಾಳೆಯ ಭಾಳ ವರ್ಣಮಂ ತೊಡೆತೊಡೆದಪ್ಪುದು (ರಾಜಶೇ. ೬–೬೧). [ಉರ್ಕುಡಿ₁ + –ಇಸು₁]

**ಉರ್ಕುಡುಗು** (ಕ್ರಿ). ಉಬ್ಬುವಿಕೆ ಕಡಮೆಯಾಗು : ಉರ್ಕುಡುಗಲ್ ಕುಮುದಂಗಳ್ ಸೊರ್ಕೊಗೆಯಲ್ ಕಮಳ... ಅರ್ಕನುದಯಿಸುವಾಗಳ್ (ಗಿರಿಕ. ೮–೬). [ಉರ್ಕು₃ + ಉಡುಗು₁]

**ಉರ್ಕುದೊಱಿ** 'ಉರ್ಕುಂದೊಱಿ' ನೋ.

**ಉರ್ಕೆವ** 'ಉಕ್ಕೆವ₁' ನೋ.

**ಉರ್ಗವುಂಡು** 'ಊರ್ಗಾವುಂಡು' ನೋ.

**ಉರ್ಗವುಂಡುಗೆಯ್** 'ಊರ್ಗಾವುಂಡುಗೆಯ್' ನೋ.

**ಉರ್ಗಿವಳೆದೆಣ್ಣೆ** (ನಾ). ಉರಿ ಸುತ್ತಿಕೊಂಡಿರುವ ಎಣ್ಣೆ ; ಉರಿಯುತ್ತಿರುವ ಎಣ್ಣೆ : "ಉರ್ಗಿವಳೆದೆಣ್ಣೆ [ಪಾಠಾಂ. ಉಗ್ಗಿವಳೆದೆಣ್ಣೆ, ಉರ್ಗಿವಳೆದೆಣ್ಣೆಯೆಂದು] = ಉರಿವೆಣ್ಣೆ" (ಶಮುದ. ಪರಿ. ೨). 'ಅಗ್ಗಿವಳೆದೆಣ್ಣೆ' ಪರಾ. ℙ ಇದು ಅಗ್ಗಿವಳೆದೆಣ್ಣೆ ಎಂಬುದರ ಅಪಲಿಖಿತ.
[< ಅಗ್ಗಿವಳೆದೆಣ್ಣೆ]

**ಉರ್ಗು₁** 'ಉರ್ಕು₁' ನೋ.

△ **ಉರ್ಗು₂** (ನಾ). ತೊದಲುವಿಕೆ ; ಬಿಕ್ಕುವಿಕೆ. 'ಉರ್ಗುಗೊಳ್' ಪರಾ. [< ಉಗ್ಗು₃]

**ಉರ್ಗುಗೊಳ್** (ಕ್ರಿ). ತೊದಲುಂಟಾಗು ; ಉಗ್ಗನ್ನು ಹೊಂದು : ಅಗ್ರಹಿಸಿ ತರ್ಕಶಾಸ್ತ್ರ ಸಮಗ್ರತೆಯಂ ತೋರ್ಪುದಿಲ್ಲಿ ನೀಮೆನೆ ಕುಳಿಕಾಹಿಗ್ರಸ್ತರಂತೆ ನುಡಿವುದವಗ್ರಹಮೆಂದುರ್ಗುಗೊಂಡರಂತೆ ನಿತಾಂತಂ (ಸುಕುಮಾ. ೧–೧೯). [ಉರ್ಗು₂ + ಕೊಳ್₁]

△ **ಉರ್ಚಾಟಿಸು** 'ಉಚ್ಚಾಟಿಸು' ನೋ.

**ಉರ್ಚಿಸು, ಉಚ್ಚಿಸು** (ಕ್ರಿ). ೧. ಭೇದಿಸು ; ಸೀಳು : ಲೀಲೆಯೊಳೆ ಪಿಡಿದು ನಿಲಿಪಂ ವ್ಯಾಳೇಭಮನೊಂದು ಪೊಯ್ಲಿನಿಂದಮೆ ಕಡಿವಂ ತಾಳಂಗಳನುರ್ಚಿಸುವಂ ಶೈಲಶಿಲಾತಳಮನೆಳವೆಯೊಳ್ ನೃಪತನಯಂ (ಕಾದಂಪೂ. ೩೩೮). **ಉಚ್ಚಿಸು** : ೧. ಕಚ್ಚಿಪರು ಫಣಿಗಳಲಿ ಕ್ರಿಮಿಗಳೊಳುಚ್ಚಿಪರು ಸರ್ವಾಂಗವನು ಮನದಿಚ್ಛೆ ಬಂದಂತೋಡಿಪರು ನಗ್ನದೊಳು ಕೈವೊಯ್ದು (ಉತ್ತರಾ. ೬–೧೬). ೨. ಸಡಿಲವಾಗುನಂತೆ ಮಾಡು ; ಕಳಚು (ಕ). [ಉರ್ಚು + –ಇಸು₁]

**ಉರ್ಚು, ಉಚ್ಚು₁, ಉಚ್ಚು** (ಕ್ರಿ). ೧. ಹಿರಿ ; ಹೊರಕ್ಕೆ ತೆಗೆ ; ಕೀಳು ; ಸೆಳೆ : "ಉರ್ಚು – ಆಕರ್ಷಣೇ, ಮುಲಭೇದನೇ ಚ" (ಶಮಧಾ) ; ಆರ್ಥರಾಶಿಯಂ ಪಡೆವವರೆಲ್ಲಮೋಗಡಿಸದೀವೊಡಮಾಜಿಯೊಳುರ್ಚಿ ಕೈದುವಂ ಪಿಡಿವವರೆಲ್ಲಮುಣ್ಮುವೊಡಂ (ಕಾವ್ಯಸಾ. ೪೨೩ ಶೂದ್ರಕ) ; ಕೌರವರ್ಕಳನುಂತಿನ್ನೆಗಮುರ್ಚಿ ಮುಕ್ಕದೆ ಸಡಿಲ್ದೀ ಭೀಮನೇಂ ಮಾಣ್ಣುಮೇ (ಪಂಪಭಾ. ೬–೧೪) ; ವಿಯೋಗಿಗಣಕ್ಕುರ್ಚುವ ಮೇಘಮನ್ಮಥನ ತೂಣೀರೋದ್ಗತ ಜ್ವಾಲೆಯಂಬುಗಳೋ (ಕುಸುಮಾ. ೬–೧೫) ; ಬರಲಿ ಬರಲಿವನಸುವನುರ್ಚುವೆ [ಪಾಠಾಂ. ಉಚ್ಚುವೆ] (ತೊರರಾ. ೬–೨೧–೪೦).

೨. ಚುಚ್ಚು; ತಿವಿ ; ಇರಿ : ವಜ್ರಕೀಟಂಗಳ್ ಕರ್ಣನೆರಡುಂ ತೊಡೆಯುಮನುಳಿಯನೂಱ ಕೊಡಂತಿಯೊಳ್ ಬೆಟ್ಟದಂತತ್ತಮಿತ್ತಮುರ್ಚಿಪೋಗೆ (ಪಂಪಭಾ. ೧೧-೧೧೪ ವ) ; ಉಡಿದಿರ್ದ ಕಯ್ದು ನೆತ್ತರ ಕಡಲೊಳಗಡಿಗಡಿಗೆ ತಳಮನುರ್ಚುತ್ತಿರೆ (ಗದಾಯು. ೪-೧೪) ; ಕೇದಗೆಗೆ ಪಾಯ್ದು ಪತ್ತಿದ ಕೆಯ್ಯುಂ ಮುಳ್ಳುರ್ಚಿ ತೆಱದು (ಕಾವ್ಯಾವ. ೮೧೩) ; ಉರಪೊಡೆದು ಸರಳುರ್ಚಿ ಸರಳುತ್ತ (ಹಜಕಾ. ೬-೩೦). ೩. ಚುಚ್ಚಲ್ಪಡು ; ತಿವಿಯಲ್ಪಡು : ಬಲ್ವೆಣನುರ್ಚಿ ಕೋಡೊಳಿರೆ ನೆತ್ತರುರೋಮಣಿಯಿಂ ನೆಲಕ್ಕೆ ಬಾನಲ್ವರಿವನ್ನೆಗಂ . . . ಬಂಬಲ್ವರಿಯುತ್ತುಮಿರ್ದುದು (ಕಾವ್ಯಾವ. ೬೪೮). ೪. ಜಾರಿಬೀಳು; ಕಳಚಿಹೋಗು; ಉದುರು: ಕಯ್ಯಿಂದಮುರ್ಚುವ ಕಂಕಣಂಗಳಂ ತುಡಿಸುತ್ತುಂ (ಕಾದಂಉ. ೨೦೨) ; ಚರಣತಳಕ್ಕೆ ಬೀೞ್ವ ಮಣಿಕಾಂಚಿಯನೆತ್ತದೆಯುರ್ಚುತಿರ್ಪ ನೂಪುರಮನೆ ಸೈತು ಸಾರ್ಚದೆ (ಶಾಂತೀಶ್ವ. ೩-೨೯) ; ಕದ್ದೈಸವೆ ನೋಡು ಸ್ಮರನ ಬಾಯೊಳಗುರ್ಚಿಬಿದ್ದಂತೆ (ಮೋಹತ. ೩೦-೩೨). ೫. ರಭಸದಿಂದ ನುಗ್ಗು ; ಭೇದಿಸಿಕೊಂಡು ಹೊರಬರು ; ಸೀಳಿಕೊಂಡು ಬರು : ಬಾಳ ದಿನೇಶಬಿಂಬದ ನೆೞಲ್ ಜಲದೊಳ್ ನೆಲಸಿತ್ತೊ ಮೇಣ್ ಫಣೀಂದ್ರಾಲಯದಿಂದಮುರ್ಚಿದ ಫಣಾಮಣಿ ಮಂಗಳ ರಶ್ಮಿಯೋ (ಪಂಪಭಾ. ೧-೯೬) ; ಮಿಱಿದಡೆ ಮಿತ್ತುಕ್ಕಿ ಕಡಂಗಿದೊಡಾರ್ದ್ದು ಭೈರವಂ ಕೆರಳ್ದಡೆ ಸಿಂಹವುರ್ಚಿದಡೆ ಪೆರ್ಬ್ಬುಲಿ (ಎಕ. XI, ಚಿತ್ರದು. ೧೩-೧೪ ; 1124) ; ತುಂಗಸ್ತನಯುಗ್ಮಂ ತೊಗೆ ಸೂತ್ಕಾರದಿನುಸಿರ್ವಿಡುತುಂ ಲೋಳೆವಾಯುರ್ಚಿಯೊರ್ವಳ್ ತೊನೆಯುತ್ತುಂ ಪಾಡಿಪಾಲಂ ಪೊಸೆದಳ್ (ಲೀಲಾವ ೫-೧೨೪). ೬. ಸುಡು ; ದಹಿಸು : ಕಡುವಿಸಿಲುರ್ಚಿ ಕೋಮಲಲತಾತನು ಬಂಬಲ ಬಾಡೆ (ಪಂರಾಮಾ. ೭-೧೧೩). ೭. ಹೊರಕ್ಕೆ ಚಾಚು, —ನೀಡು : ಬೇಸಗೆಯ ಕೋಣನಂತೆ ನಾಲಗೆಯನುರ್ಚಿ (ಧರ್ಮಾಮೃ. ೧-೧೭೪) ; ನರಹಾಪೆತ್ತಿನಂತೆ ನಾಲಗೆಯನುರ್ಚುವ (ಧರ್ಮಾಮೃ. ೩-೨೦೭). ೮. ಮಲವಿಸರ್ಜನೆಯಾಗು ; ಭೇದಿಯಾಗು: "ಉರ್ಚು – ಆಕರ್ಷಣೇ, ಮಲಭೇದನೇ ಚ" (ಶಮುಧಾ) ; ತವೆ ಕಿಱುಕುಸಾಲೆ ನಿಜಸ್ಯಂಧವ ಬಿಲ್ವಂ ಲೊಕ್ಕಿಯಾಲನೊಟ್ಟೊಟ್ಟಿ ಸರೋಜವಸಲೆ ಬಸಿರಿಯ(ಯಾ)ವರೆಯೆಂಬಿವು ಮಾಣಿಸುಗಿರವೆ ಪಶುಗೆ ಬಸಿಱುರ್ಚುವುದಂ (ಲೋಕೋಪ. ೯-೨೦೩). ೯. [ಗಣಿತ] ಭಾಗಿಸು ; ಭಾಗಾಹಾರ ಮಾಡು: ಪಸು, ಪಸಲು, ಭಾಗಂಗೊಳು, ಸೆಳೆ, ಉರ್ಚು[ಪಾಠಾಂ. ಚೆಂ]ದುಂ, ಇಂತಿನಿತುಂ ಭಾಗಂಗೊಂಬುದಕ್ಕೆ ಪೆಸರು (ವ್ಯವಹಾ. ೧೨) ; ಪದಿನಾಱುಂ ತಾಣದೊಳ್ ಪುಟ್ಟುವ ಗಣಿತತಿಯಂ ತಮ್ಮೊಳೊಂದೊಂದನಾಹ್ಲಾದದಿನುರ್ಚಲ್ಕಲ್ಲಿ ಕಂಡಾ ಗಣದ ಕೆಳಗೆ (ಛಂದೋಂಬು. ೬-೧೧).

ಉಚ್ಚು₁ : ೧. ಮುಂಜೂರ ಹುಲ್ಲನುಚ್ಚುತ್ತೆ ಶಿವಧೋಯಿಡುತೆ (ತಿರುರ. ೨೭-೨೫) ; ಉಚ್ಚಿದಾಯುಧದಿಂದಲಿರ್ವರಂ ತಿವಿಯೆ (ಚೆಬಪು. ೬೩-೧೪). ೨. ಪೊಳಪಿಂದಂ ಚಲ್ಲೆಗಣ್ ಕಾಮನ ಕುಸುಮಶರಾನೀಕಮಂ ಪೋಲ್ವ ಭ್ರೂಪಾವಳಿಯಂ ಕಯ್ಯಾಗಿಯದುಚ್ಚುತ್ತಿರೆ ವಿಟಜನಮಂ ಸತ್ಕಟಾಕ್ಷಂಗಳಿಂದೆ (ಧರ್ಮಾಮೃ. ೧೩-೧೭) ; ಬೀಜದಡಿಯೊಳ್ ಬೇರುಚ್ಚಿ ನಿಲ್ವುದುಮಂ ಬಗೆಮೊಳೆ ಪೊಱಮಟ್ಟು ಪೆಚ್ಚಿ ಫಲಮಪ್ಪುದುಮಂ ಕಾಣಲಪ್ಪಂತೆ (ಬಂಹರಿ. ೧೦-೧೦ ವ) ; ಪೆಚ್ಚಿರ್ದ ದ್ರೌಪದಿ ಸುಭದ್ರೆಗಂ ಹರುಷರಸವುಚ್ಚಿದುದು (ತುರಂಗ. ೮೦-೩೩). ೪. ತಲೆಯ ನವಿರುಚ್ಚುತಿರೆ ತಾರೆಗಳ್ (ಕಲ್ಯಾಕಾ. ೨-೧) ; ಆಕಾಶದಿಂದುಚ್ಚಿದುವು ತಾರೆಗಳ್ (ಚೆಬಪು. ೩೨-೨೩) ; ಹೊಲಿದ ದಾರ ಹರಿದು ಓಲೆಗಳು ಉಚ್ಚುವುವು (ಮುಂಬಯಿ. ೨-೭) ; ಗೋವರ್ಧನನ ಬಾಯಿಂದ ಫಕ್ಕನೆ ಮಾತು ಉಚ್ಚಿತು (ಮುಗಿಮ. ೧೦೫). ೮. ಸಣ್ಣವರ ಜ್ವರ, ಕೆಮ್ಮು, ಉಚ್ಚುವುದಕ್ಕೆ, ಓಕರಿಕೆಗೆ :– ಕರ್ಕಾಟಕಶೃಂಗಿ, ಹಿಪ್ಪಲಿ, ಅತಿಬಜೆ, ಭದ್ರಮುಸ್ತೆ, ಇವಂ ತೇದು ಮೊಲೆಹಾಲಲ್ಲಿ ಜೇನುತುಪ್ಪದಲ್ಲಿ ಕುಡಿಸೆ ಜ್ವರ, ಅತಿಸಾರ . . . ಮಾಣ್ಬುಂ (ವಿವೈವಿ. ೧೯) ; ಇದ್ದಕ್ಕಿದ್ದಹಾಗೆ ದನಗಳು ಉಚ್ಚಿಕೆಕೊಂಡರೆ (ಪುಟ್ಟಹ. ೧೧). ೧೦. ಕಳಚು ; ಸಡಿಲವಾಗು : ಯುದ್ಧದುಳ್ ಉಱಿಕೀಲ್[ಲು]ಚ್ಚಿದ ವಂಬುವಾಳ್ವಲಗೆಯುಳ್ಳಟ್ಟು (ಸೌಇಇ. IX-i, ೩೯೨-೩ ; ೪ನೆಯ ಶತ). ೧೧. ಸಡಿಲಿಸು ; ಬಿಚ್ಚು ; ತೆಗೆ : ಆ ಏರಿಯೊಳಗೆ ಒಂಬತ್ತು ತೂಬನುಚ್ಚಿದರೆ ಆಕಾಶವೆಲ್ಲವೂ ಜಲಮಯವಾಯಿತ್ತು (ಅವಜಂ. ೧೮೯-೯೪).

△ ಉಚ್ಚು₂ : ೧. ಅಜ್ಜರ ಸಿಜ್ಜ ಪೆಣ್ಣಕ್ಕಿಜುಮುಂಕ್ಕಾಳಾ ಉದುಗುಱಿಯನುಚ್ಚಿಕೊಳ್ವ ಪ್ರಿಯ × × × ಪಲರುಮಂ ಕೊಂದು (ಎಕ. VIII, ಸೊರಬ. ೨೨-೩ ; 800) ; ಮಾಗರಯ್ಯಂ ಪಣ್ಣ ಪೆಣ್ಡಿರಸುಡೆಯನುಚ್ಚುಲುಮೆಚ್ಚಿನ ತುಱುಗೊಳೊಳುಮಚ್ಚಿ ಸತ್ತನ್ (ಎಕ. X, ಮುಳಬಾ. ೧೬೧-೨ ; 950) ; ಚುಚ್ಚಿದ ತೆಱದಿಂ ಪುಸಿಗಳನುಚ್ಚುವನಿವನೆಂದು ಕಾಯ್ದು ಕರ್ಬುನದಿಂದಂ ಚುಚ್ಚಿ ಪೆಡತಲೆಯ ತೂಂತಿಂದುಚ್ಚಿ [ಪಾಠಾಂ. ಳ್ಚು]ವರಿಕ್ಕುಱಿಸಿ ನಾರಕರ್ ನಾಲಗೆಯಂ (ಸುಕುಮಾ. ೧೧-೪೪).

ಉರ್ಚವೇೞ್ = ಭೇದಿಸುವಂತೆ ಹೇಳು ; ಸುಲಿಯುವಂತೆ ಹೇಳು : ತುಱುವಂ ಕಳಿಸುವ ಕೃಷ್ಣೆಯ ನಿಱುಯಂ ಪಿಡಿದುರ್ಚವೇೞ್ವ ಕೊಳನಂ ಪಿಂದುಂ ಪೆಱಗಾಗಿ ಪುಗುವ ದುರ್ನಯಮಱಪವೆ ಕೌರವನ ರಾಜ್ಯದಾಯುವ ಕೇಡಂ (ಗದಾಯು. ೬-೧೦). ಉರ್ಚಿಕೊಳ್ = (ಒರೆ ಅಥವಾ ಬತ್ತಳಿಕೆಯಿಂದ) ಸೆಳೆದುಕೊ ; ಕೀಳು : ತನಗೆ ವಿನಾಯಕಂ ದಯೆಯಿನಿತ್ತ ಜಯಾಸ್ತ್ರಮನುರ್ಚಿಕೊಂಡು (ಪಂಪಭಾ. ೧೨-೧೭೪) ; ನಿಶಿತಾಸ್ತ್ರಂಗಳನೊಱಯಿಂದುರ್ಚಿಕೊಂಡು (ಧರ್ಮಾಮೃ. ೭-೧೦೫) ; ಅಸುವಂ ಕಳೆಯದಿರ್ಪ ಕಡುಗಳ್ಗರನೇಂ ಪಿಡಿದುರ್ಚಿಕೊಂಡರೋ (ಅರ್ಥನೇ. ೫-೨೯). ಉರ್ಚಿತಿನ್ = ಕಿತ್ತುತಿನ್ನು : ಗಜಮಾಂಸವನುರ್ಚಿತಿಂದು ಕೊಗಿದುವ ಮರುಳ್ (ಎಕ. VIII, ಸೊರಬ. ೧೮೪-೧೦ ; 1033). ಉರ್ಚಿಪಾಯ್ = ೧. ರಭಸದಿಂದ ನುಗ್ಗು ; ಭೇದಿಸಿ ನುಗ್ಗು : ಭುಗಭುಗನುರ್ಚಿಪಾಯ್ವ ಬಿಸುನೆತ್ತರ ಸುಟ್ಟುರೆಯಂ (ಪಂಪಭಾ. ೧೦-೪೦). ೨. ಮೇಲಕ್ಕೆ ಚಿಮ್ಮು : ಮೊಲೆವಾಲಾದಂ [ತಾನೆತ್ತಲುಂ] ತೊರೆದುರ್ಚಿಪಾಯ್ವಿನೆಗಮಿರದೆಳ್ತಂದಳ್ ಸೋತ್ಕಂಠ ಪುತ್ರವಿಮೋಹದಿಂ (ಕಾದಂಉ. ೬೭೩). ಉರ್ಚಿಪೋಗು = ೧. ಬಸಿ ; ಸುರಿ ; ಮೇರೆವರಿ : ದೊರೆವಡೆದಿರ್ದುದಿರ್ವರ ಮನೋರಥಮುಗ್ಗಳಮುರ್ಚಿಪೋದುದಿರ್ವರ ಮನದೞ್ಕಱಚ್ಚುಡಿದುದಿರ್ವರ . . . ಮಚ್ಚು (ಶಾಂತಿಪು. ೧-೭೯). ೨. ನುಗ್ಗಿಹೋಗು ; ಭೇದಿಸಿಕೊಂಡು ಹೋಗು : ಅಚ್ಛಿನ್ನ ಶಿಲಾಭಿಧಾನ ಗುಹಾಭ್ಯಂತರದಿನುರ್ಚಿಪೋಗಿ (ನೇಮಿಪು. ೪-೯೬ ವ) ; ಪಿರಿದೆನ್ನಂಗದೊಳಾದ ಪುಣ್ಗಳ ಗುಹಾದ್ವಾರಂಗಳೊಳ್ ಪೊಕ್ಕು ಪುಲ್ಮರುಳೆತ್ತಂ ನುಸುಳ್ದುರ್ಚಿಪೋಪಿನೆಗಮೊಂದಾಟೋಪದಿಂ ಕಾದುವೆಂ (ಜಗವಿ. ೧೭-೮೬). ಉರ್ಚಿಬರ್ = ಉರ್ಚಿಪಾಯ್ : ಪರಿವ ಪೊಡರ್ವುಗೆಟ್ಟು ರವಿ ಮುಂದಿರೆ ಲಜ್ಜಿಸಿ ಕಣ್ಣ ಬೆಳ್ಪುಗಳ್ ಕರಮೊಳಗುರ್ಚಿಬಂದು . . . ಪುಟ್ಟಿಸುತಿರ್ದುದು (ಧರ್ಮಾಮೃ. ೭-೨೧೩). ಉರ್ಚಿಬೀಳ್ = ಕಳಚಿಬೀಳು ; ಜಾರಿಬೀಳು : ಗರ್ಭದ ಕೂಸುಗಳುರ್ಚಿಬೀಳ್ವಂತೆ ಮುಗಿದುವು ಮಿಳ್ತುಗಳೆನಿಸೆ (ಮೋಹತ. ೧೯-೧೯) ; ಹಲಸಿನ ಬೀಜ ಉರ್ಚಿ ಬಿತ್ತು (ರೂಢಿ). ಉರ್ಚಿಮುಕ್ಕು = ಉರ್ಚಿತಿನ್ : ತಕ್ಕಿನಭಿಮನ್ಯುವಕೊರ್ಗಣೆ ಪಾಯ್ದು ನುಂಗಲುಂ ಟೊಣೆಯಲುಮುರ್ಚಿಮುಕ್ಕಲುಂ (ಪಂಪಭಾ. ೧೧-೯೪) ; ಬಱಿದೆ ತಿರುಗಿದೊಡೆ ಮಱಿಯಂ ಕಱಿಯದೆ ವಕ್ರಿಸಿದೊದುರ್ಚಿಮುಕ್ಕುವೆನೆಂದಳ್ಕಱಿಸಿ (ಅನಂಪು. ೧೩-೯). ಉರ್ಚೇೞ್ = ಮೇಲಕ್ಕೆ ನೆಗೆ, —ಚಿಮ್ಮು : ಬಿಬ್ಬಿ ಭರದಿಂದೆ ವಾರಿಯೆರೆಚಿ ನೆಗೆಂ ಪಚ್ಚು ಸೂಸೆ ಕೊಳದೊಳಗೆ ಬಯಲ್ ಬಿಬ್ದುದು ತದ್ರಭಸಕ್ಕುರ್ಚೆೞ್ದು ಕಡಂಗಿದುವು ಜಳಚರಪ್ರಕರಂಗಳ್ (ಚಂದ್ರಪು. ೫-೯೩).

[ದೇ. ॥ ತಮಿ. ಉರಿ ; ಮಲ. ಉರಿ]

**△ಉರ್ಜುಗ** (ನಾ). ಪ್ರಯತ್ನ; ಉದ್ಯೋಗ; ಕಾರ್ಯ; ಕೆಲಸ: ಜರ್ಜಿಪ ಭೂಷಣವನಿತ್ತೀಗ ಬಹ ಸಮರಕುಜುರ್ಗಂಗೊಳಿಕೆಂದು ಬೀಳ್ಕೊಟ್ಟ (ಜಿನಮು. ೧೬–೨೨). 'ಉಜ್ಜುಗ' ಪಠಾ. [< ಉಜ್ಜುಗ]

**ಉರ್ಜುಗಂಗೊಳ್** (ಕ್ರಿ). ಪ್ರಯತ್ನಿಸು; ಉದ್ಯೋಗಿಸು: ಜರ್ಝರಿಸಲಗ್ನಿಪ್ರವೇಶಕಿಳಿಯಾಣ್ಮೆ ಧೃತಿಗುಜುರ್ಗಂಗೊಳಲು ಸೀತಾ ಮೈದುನಾತ್ಮಜರು (ಜಿನಮು. ೪೦–೧೫). [ಉರ್ಜುಗ + ಕೊಳ್$_1$]

**ಉರ್ಜುಗಿಸು** 'ಉಜ್ಜುಗಿಸು' ನೋ.

**ಉರ್ದಂ** 'ಉದ್ದಂ' ನೋ.

**ಉರ್ದಿಡು** (ಕ್ರಿ). ಉಜ್ಜಿಹಾಕು; ಒರಸಿಹಾಕು: ಆರ್ಪಿನುಂ ಕಾಪಿನುಂ ಪತ್ತಿ ನೆಲನೆಲ್ಲಮನೆತ್ತಿದಂ ಸ್ಪಷ್ಟದಂಡದಿನುರ್ದಿಟ್ಟನಿರುಳ್ ತೊಂದರೆ ಗಾರರಂ (ಸೌನಂದ. ೨–೨೮). [ಉರ್ದು$_1$ + ಇಡು$_1$]

**ಉರ್ದಿಸು, ಉಜ್ಜಿಸು** (ಕ್ರಿ). ತಿಕ್ಕಿಸು; ತೇಯಿಸು: ಕೈಸಾಣೆಗಳಿಂದಂ ನಾಲ್ಕುಂ ವಾಡೆಗಳನುರ್ದಿಸಿ ಕಳೆದು ಮಟ್ಟಂ ಮಾಡಿದೊಂ (ಪದ್ಮಾರಾ. ೧೬೫–೧೪); ಅಗುರುಮಂ ಕುಂಕುಮವನರೆಯಿಸುತೆ ... ಸಾದಿನಿಂ ಪೊಗೆಯ ಗಂಧವನುರ್ದಿಸುತೆ ಪೂವ ಪೊರೆಯಿಸುತೆ ಬಗೆಗಾರ್ತಿಯೊರ್ವಳೆಸೆದಳ್ (ಪದ್ಮರಾ. ೮–೮೯). **ಉಜ್ಜಿಸು**: ಪಾತ್ರೆಗಳನ್ನು ಚೆನ್ನಾಗಿ ಉಜ್ಜಿಸಬೇಕು (ರೂಢಿ). [ಉರ್ದು$_1$ + –ಇಸು$_3$]

**ಉರ್ದು$_1$, ಉಜ್ಜು, ಉದ್ದು$_1$** (ಕ್ರಿ). ೧. ಒರಸು; ತಿಕ್ಕು; ತೇಯು: "ಉ ದುರ್ ‒ ಸಂನಿಘೃಷ್ಟೇ (ಉಜ್ಜು) ಮಾಷೇ ಚ (ಉದ್ದು)" (ಶಮಧಾ); ಪೊರಳೆ ವಾರಿಧಿಗಳ್ ಕಲಂಕಿದುವು[ರ್ದೆ ಮೆ] [ಪಾಠಾಂ. ದ್ದಮು, ದ್ಧಮು]ಯ್ಯನುದಗ್ರಮಂದರಮದಂದಲುಗಿತ್ತು (ಪಂಪಭಾ. ೮–೧೫); ಕೆಲರಂ ಗುರ್ದಿಯುಮುರ್ದಿಯುಂ ತಿರುಪಿಯುಂ ತೇದುಂ ಭುಜಾದಂಡದಿಂ (ಗದಾಯು. ೩–೧೨); ಮಡಕೆಯನುರ್ದಿ ಕರ್ಚಿ ಸಹಕಾರದ ಪಕ್ವಫಲಂಗಳಿಂದದಂ ತೊಡೆದರೆಕಾದ ಪಾಲನೆಱೆದಂದು ಮೊಸರ್ ಸಹಕಾರ ಗಂಧಮಂ ಪಡೆಗುಂ (ಲೋಕೋಪ. ೮–೪೮). ೨. ಉಜ್ಜಿ ಹರೆಯನ್ನು ಬಾಜಿಸು: ಉದ್ದು [ಪಾಠಾಂ. ಊದು]ವಜಯಂಜೆಯ ರವಮುಂ ಬಾರಿಪ ಜಿಂಕರಮುಂ (ಅರ್ಧನೇ. ೮–೭೫ ವ); ಜಯಂಜೆಯುರ್ದಿ ಬಾಜಿಸಿ ಪಾಡುತ್ತಿರೆ (ಬಂಹರಿ. ೧೪–೨೬ ವ); ಆನಿತಱೊಳಾ ವಾದ್ಯ ವಿದ್ಯಾಧಿಕರ್ ಮರ್ದಳಮನುರ್ದಿ (ಚಿಕವಿ. ೬–೧೫೧ ವ). **ಉಜ್ಜು**: ೧. ಆತ್ಮತತ್ತ್ವವ ಮುಟ್ಟ ಬರೆದಿದ್ದ ಲಿಪಿಗಳನಾತ್ಮನೊಳರ್ತಿವಟ್ಟರಿಸಿ ಆತ್ಮತತ್ತ್ವಕೆ ಹೊಜಗಾದೊಂದು ಲಿಪಿಯ ಮಹಾತ್ಮನುಜ್ಜೆಂದು ತೋಱಿದನು (ಭರಚ. ೩೬–೮೬).

**ಉದ್ದು$_1$**: ೧. ಭವದ ಬೇರಂ ಹಱಿಯಲುದ್ದುವಂದದಿಂ ... ಭವನಾಲಯದ ಹುಲ್ಲನುದ್ದತೊಡಗಿದನಂದು (ವಾಗೀರ. ೬೯–೫); ವೀರ ಪೋಗಿ ಬಿದ್ದನು ಜಂಬೂದ್ವೀಪದೊಳಗೆ ಗಱಿಯುದ್ದಿದ ಪಕ್ಕಿಯಂದದಲಿ (ಅಂಜಚ. ೧೩–೨೯); ಚಂದ್ರಮಂಡಳದ ಕಳಂಕವನುದ್ದುವಂತೆ ಲೋಹಚಕ್ರದಿಂ ಹಳೆಯ ಬೋಹಣಮನುದ್ದಿ (ಧರ್ಮಪ. ೨–೨೩ ವ); ಮರ ಸಹಿತ ಹಿಡಿದುದ್ದಿ ನೆಲದೊಳಗೊರಸಿ ಕೊಂದನು ಕಲಿ ಹಿಡಿಂಬಕನ (ಕುವ್ಯಾಆ. ೧೦–೨೦). ೩. ಮರ್ದನ ಮಾಡು; ಅಳಿಸು: ರುಧಿರದ ಕಡಲೊಳದ್ದಿದ ನುದ್ದಿದನು ಮಾರ್ಬಲದ ಗರ್ವಿತರ (ಕುವ್ಯಾಕ. ೨–೪೫); ಕುರುಕುಲವನು ಉದ್ದುವೆನು (ತುರಂಗ. ೨೫–೯).

[ದೇ. ‖ ತಮಿ. ಉರ‍್ಞೆ; ಮಲ. ಉರಸು; ಕೊಡ. ಒರ್ಜ್, ಉಜ್; ತುಳು. ಉರೆಸು; ತೆಲು. ಒರಯು]

**ಉರ್ದು$_2$**, 'ಉಬ್ಬು' ನೋ.

**ಉರ್ದು$_3$** (ನಾ). ಉಜ್ಜುವಿಕೆ; ತಿಕ್ಕುವಿಕೆ: ಕೋಪಾನಳನಿಂ ... ಕಾಲುರ್ದಿಂಗೆ ಪೊರಳ್ದು ಭ್ರಮರಿ ಮೊದಲಾಗೊಡೆಯ ಕರಚಾರಂಗಳೊಳು (ಬಂಹರಿ. ೨–೫೦ ವ). [< ಉರ್ದು$_1$]

**ಉರ್ಪವಳ್ಳಿ** (ನಾ). ಒಂದು ಊರಿನ ಹೆಸರು: ಉರ್ಪ್ಪವಳ್ಳಿಯ ಚಾಮಯ್ಯನುಂ (ಎಕ. VI, ಚಿಕ್ಕಮ. ೩–೧೫; 899 ?); ಉರ್ಪ್ಪವಳ್ಳಿಯ ಬಾಸಗವುಣ್ಣನ (ಮೈಆರಿ. ೧೯೩೨, ೨೨–೭೪; 1012). [ಉರ್ಪು (< ಉಪ್ಪು$_1$) + ಪಳ್ಳಿ$_1$]

**△ಉರ್ಪು** 'ಉಪ್ಪು$_1$' ನೋ.

**ಉರ್ಪುಗಾಯ್** 'ಉಪ್ಪುಗಾಯ್' ನೋ.

**ಉರ್ಪುವೇಱು** (ನಾ). ಉಪ್ಪಿನ ಹೇರು (?): ತಪ್ಪಂಗ ಚಿತ್ತನವಂ ಮುಟ್ಟಿ ಉಲಾಯಮಾಗಿ ಜನಿಸಿರ್ದೋಂದರಿಂದದಿಂದುರ್ಪುವೇಱಿನೆ ಪೊತ್ತು (ಶಾಂತೀಶ್ವ. ೫–೬೫). [ಉರ್ಪು (< ಉಪ್ಪು$_1$) + ಪೇಱು$_3$]

**ಉರ್ಬಟೆ, ಉಬ್ಬಟೆ** (ನಾ). ೧. ಅತಿಶಯ; ಹಿರಿಮೆ; ಹೆಚ್ಚಳ. ೨. ಪರಾಕ್ರಮ; ಸಾಹಸ; ಸಾಮರ್ಥ್ಯ; ಶೌರ್ಯ. ೩. ಹಿಂಸೆ; ಕಾಟ; ಉಪಟಳ: ಕಡುವೇಗದಿಂ ಭದ್ರಕಾಳೀಪತಿಯ ಮುಱಿಪೊಕ್ಕು ದಳಿಳಸೈನ್ಯಂ ಪೇಳ್ವುದೇಂ ದನುಜರುರ್ಬ[ಪಾಠಾಂ. ಬ್ಬ]ಟೆಯನು (ಚಿಬಪು. ೩೨–೩೯); ಇನಿತೊಂದುರ್ಬ[ಪಾಠಾಂ. ಬ್ಬ]ಟೆಯೇ ಪುಳಿಂದ ಬಿಡು ನಿನ್ನೀ ಬಿಂಕಮಂ (ಶಬಶಂ. ೪–೭೫). **ಉಬ್ಬಟೆ**: ೧. "ಉಬ್ಬರಂ ಉಬ್ಬಟೆ, ಆಣಿಯರಂ ... ಪೆರ್ಚುಗೆ —ಈ ೧೯ ಅತಿಶಯಂ" (ಕಶಸಾ. ೧೨–೨೩೪); "ಉಬ್ಬಟೆಯುಬ್ಬರಮಣಿಯರನೆಱೆ ವಿಶಾಂಟನ್ನಲತಿಶಯಾರ್ಥಂ ಧರೆಯೊಳ್" (ಕವಿಕಂ. ೧೨೦); ಈ ಕಲಿಕಾಲದೊಳ್ ವಿಷಮಕಾಲದೊಳುಬ್ಬಟೆಯಾಯ್ತು (ಎಇ. XVI, ೬೧–೨೫; 1081); ಉಬ್ಬಟೆಯ ಭಕ್ತಿ (ತಿರುರ. ೧೪–೮); ನಿನ್ನೆಱೆಯುಂಗುಬ್ಬಟೆಯ ಬೀರಮುಂಟು (ಕಬ್ಬಿಕಾ. ೧೪೧); ಕೆಡುಮುಳಿಸಿನುಬ್ಬಟೆಯ ಮಾರುತಿ (ಕುವ್ಯಾಸ. ೧೬–೬೯). ೨. "ದಪ್ಪ ಪೆಟ್ಟದಟಾರ್ಪು ಸಾಸ ಪೆರ್ಚುಬ್ಬಟೆಯದಪ್ಪುದು" (ಶಬ್ದಮಂ. ೩೯); "ಉಬ್ಬಟೆಯೆನೆ ಶೌರ್ಯಾತಿರೇಕಂ" (ಭಾರಶ. ೪೪); ಕುಟಿಲಾಳಾಪದೆ ಪಿಂತೆ ಕಾಚಿಗ್ಗೆಡೆದು ಮುಂತಾ ಸತ್ಕವೀಂದ್ರರ್ಕಳುಬ್ಬಟಿಯಂ ಕಂಡು ಕನಲ್ದು (ಧರ್ಮನಾ. ೧–೫೩); ಪವನಜ ಪಾರ್ಥರುಬ್ಬಟೆಯ ನಿಲಿಸುವಾಪತ್ತಿಗರು ನಮಗಿಲ್ಲ (ಕುವ್ಯಾದ್ರೋ. ೪–೭); ಸಮೀರಣ ನುಬ್ಬಟೆಯಿಂದೆ ವಾರಾಶಿ ಬಳೆದುವು (ಪೋಹತ. ೩೬–೫೦). ೩. "ಉತ್ಪಾಟ, ಉಬ್ಬಟೆ" (ಶಬ್ದಾನು. ೧೬೦ ಪ್ರಯೋ); ಗರುಡನುಬ್ಬಟೆಗಹಿನಿಕರ ಜರ್ಝರಿತವಾದವೊಲು (ಕುವ್ಯಾದ್ರೋ. ೧೬–೧೨); ಮದದಂತಿಯುಬ್ಬಟೆಗೆ ಸಿಲುಕಿದ ಶಿಶುಗಳುಳಿದುದುಂಟೇ ಧರೆಯೊಳು (ಸೌಂದಪು. ೩–೪೭); ದಿವಿಜರಾ ಬ್ರಹ್ಮಾಂಡಪತಿಯಂಘ್ರಿಯಲಿ ಸೈಗೆಡೆದು ... ದೈತೇಯರುಬ್ಬಟೆಗಳನು ಬಿನ್ನೈಸೆ (ನಿಭಾಗ. ೬–೭–೧೭). [< ಉರ್ಪು + –ಅಟೆ]

**ಉರ್ಬರೆ** (ನಾ). ಭೂಮಿ; ನೆಲ: ಕಬ್ಬಿಂಬಭಿಧಾನಂ ಕಾಚಿಗ್ಗಬ್ಬಿಂಗಂ ನೆಗಬ್ದಿ ಮೆಲ್ವ ಕಬ್ಬಿಂಗಂ ಕೇಳುರ್ಬರೆಯೊಳಕ್ಕುಂ (ಧರ್ಮಾಮೃ. ೧–೯೦). [< ಉರ್ವರೆ]

**ಉರ್ಬಳಿ** (ಕ್ರಿ). ಉಬ್ಬರ ಇಳಿ: ಬಿರಿವ ಸರೋರುಹಂ ಮುಗಿವ ಕೈರವ ಪಂಕ್ತಿ ... ಉರ್ಬಳಿವ ಸಾಗರವೊಪ್ಪುದು ಸುಪ್ರಭಾತದೊಳ್ (ವೃಷವಿ. ೯–೨೪). [ಉರ್ಬು$_1$ (< ಉರ್ಪು$_1$) + ಅಳಿ$_1$ (< ಅಱಿ$_1$)]

**ಉರ್ಬಿ** (ನಾ). ಭೂಮಂಡಲ; ನೆಲ: ಉರ್ಬ್ಬಿಯೊಳ್ ಸಕಲದೊಳೊರ್ಬ್ಬನೆ ಗಣ್ಡ ಶ್ರೀಚಜನ್ನಮನೆಸ್ತುಮೊಳ್ಪಿಡೆಯನ್ (ಎಇ. XXVI, ೨೬–೬; 885); ಜಯಸಿಂಹವಲ್ಲಭನನನ್ವಯರಾಜ್ಯದೊಳುರ್ಬ್ಬಿಯೊಳ್ ವಿಗುರ್ಬಿಸಿದನ್ (ಎಕ. VIII, ನಗರ. ೩೫–೨೯; 1077); ಪೆರ್ಬಿಸಿಲರ್ಬಿಸಿ ತುರ್ಬಿ ನಿದಾಘಮುರ್ಬಿಯೊಳ್ (ಜಗವಿ. ೧೭–೭೬); ರಾಯಭೂವರ ನಿಧಿ ಬುಕ್ಕರಾಯ ನಿನಗಾರ್ದೊರೆ ಮಿಕ್ಕಿನ ರಾಯರುರ್ಬಿಯೊಳ್ (ಎಕ. XI, ಚಿತ್ರದು. ೨–೧೦; 1355); ಉರ್ಬಿಗತಿಹಿತಮಾಯ್ತು (ನಿಭಾಗ. ೪–೧೪–೪೭). [< ಉರ್ವಿ]

**ಉರ್ಬಿನಂ** 'ಉರ್ವಿನಂ' ನೋ.

**ಉರ್ಬಿಸು** 'ಉರ್ವಿಸು' ನೋ.

**ಉರ್ಬೀಪಾಳ** (ನಾ). ದೊರೆ ; ರಾಜ : ಬಂನ್ದನೀ ಬಂನ್ದನೆಂದುರ್ಬೀಪಾಳರ ಕಂಣ್ಗೆ (ಎಕ. VI, ಕಡೂರು. ೨-೭ ; 1110).
[< ಸಂ. ಉರ್ವೀಪಾಲ]

**ಉರ್ಬು$_1$** 'ಉರ್ವು$_1$' ನೋ.

**ಉರ್ಬು$_2$** 'ಉರ್ವು$_2$' ನೋ.

**ಉರ್ಬುಗುಂದು, ಉಬ್ಬುಗುಂದು** (ಕ್ರಿ). = ಉರ್ಬುಗೆಡು : ಪುಲ್ಲಂ ಮೇಯಲೆಳಸಿ ಬಂದು ಮೆಯ್ಮ ತೀಂಟಿಗೆ ಪುಲಿ ಪೊರಳ್ದು ಪೋದ ತಾಣದೊಳ್ನಿಂದು ಗರ್ಬಿಂಗಗಿದುರ್ಬುಗುಂದಿ ಹಮ್ಮದಂಬೋದ ಹರಿಣಂಗಳಿಂ (ರಾಜಶೇ. ೫-೫೫ ವ). **ಉಬ್ಬುಗುಂದು** : ತಾರ್ಕಿಕರುಬ್ಬುಗುಂದಿದರುತ್ತಮೋತ್ತಮ ಬಾಚಿರಾಜನುದಾತ್ತಮಹಿಮನು ಮರ್ತ್ಯನೇ (ಬಸಪು. ೫೪-೮೪). [ಉರ್ಬು$_2$ (< ಉರ್ವು$_2$) + ಕುಂದು$_1$]

**ಉರ್ಬುಗೆಡು, ಉಬ್ಬುಗೆಡು** (ಕ್ರಿ). ಉತ್ಸಾಹಗೆಡು ; ಹುರುಪು ಕಡಮೆಯಾಗು : ನೀತಿಗೆಟ್ಟಿಂ ಮುಱಿದು ಮಿಗೆ ಮನಂಗೆಟ್ಟಿನಾನುರ್ಬುಗೆಟ್ಟಿಂ (ರಕ್ಷಾಶ. ೫೩). **ಉಬ್ಬುಗೆಡು** : ಕಳವಳಿಸದುಬ್ಬುಗೆಡದಡಿಯಿಡದೆ (ಬಸಪು. ೪೪-೨೨) ; ಉಬ್ಬುಗೆಡದಿರಿ ಕರ್ಣ ಪಾರ್ಥ ಸಗರ್ಭರಹಿರೋ (ಕುವ್ಯಾಕ. ೨೩-೩). [ಉರ್ಬು$_2$ (< ಉರ್ವು$_2$) + ಕೆಡು]

**ಉರ್ಬುಜವ್ವನೆ** (ನಾ). ಯೌವನ ಏರುತ್ತಿರುವವಳು ; ಏರುಂಜವ್ವನೆ : ಕೊರ್ಬಿದ ಶರೀರೆ ಸೂಕ್ಷ್ಮಾಪಾಂಗೆ ಕೆಂಗೂದಲುರ್ಬುಜವ್ವನೆ . . . ಎಡೆಯಾಡುತ್ತಿರೆ (ಚೆಬಪು. ೧೦-೨೫).
[ಉರ್ಬು$_1$ (< ಉರ್ವು$_1$) + ಜವ್ವನೆ]

**ಉರ್ಬೇಱ್** 'ಉರ್ವೇಱ್' ನೋ.

**ಉರ್ಬೇಱಿಸು** (ಕ್ರಿ). ಹಿಗ್ಗಿಸು ; ನಿಗುರಿಸು : ಒರ್ಮೆಯೆ ಮುಟ್ಟೆವಂದುದು ಬೆರಂಟುತ್ತುಂ ಮುಹೀರಂಗವಂ ಕೆಲೆದುರ್ಬೇಱಿಸುತಂಗವಂ ಮೊನೆಯಿಡುತ್ತುಂ ಶೃಂಗವಂ ಪುಂಗವಂ (ಜಗವಿ. ೫-೩೬).
[ಉರ್ಬೇಱ್ (< ಉರ್ವೇಱ್) + -ಇಸು$_3$]

**ಉರ್ಮಟಿ, ಉರಮಟ್ಟ, ಉರ್ಮಟ್ಟ** (ನಾ). (ಉಕ) ಉದ್ಧಟ ; ಧೂರ್ತ ; ಧಾಂಡಿಗ : ಆ ಉರ್ಮಟಮಂದೀಕಡೆ ಹೋಗಬ್ಯಾಡೊ . . . ನಮ್ಮ ಮನೆತನದ ದರ್ಜಾಕ್ಕೆ ಭೂಷಣವಲ್ಲ (ಎತ್ತಿಕೈ. ೭). **ಉರಮಟ್ಟ** : ಅವನು ಬಹಳ ಉರಮಟ್ಟ ಇದ್ದಾನೆ (ರೂಢಿ). **ಉರ್ಮಟ್ಟ** : ಅಂವಾ ಏನ ಬರೇ ಉಲಕೋಚಿನ ಇಲ್ಲಾ, ಉರ್ಮಟ್ಟನೂ ಇದ್ದಾನ (ದೀಪಹ. I, ೨೯). [← ಮರಾ. ಉರಮುಟ್. / ಸಂ. ಉನ್ಮತ್ತ]

**ಉರ್ಮಟ್ಟ** 'ಉರ್ಮಟಿ' ನೋ.

**ಉರ್ಮೆ** 'ಊರ್ಮೆ' ನೋ.

**ಉರ್ಲಜಾಡ್ಯ** (ನಾ). ದನಕರುಗಳಿಗೆ ಬರುವ ಒಂದು ರೋಗ ; ಕೂದಲುದುರುವ ರೋಗ (ಎಸಮ್ಮೈ. XV, ೪೨). [ಉರ್ಲು ?+ ಜಾಡ್ಯ]

**ಉರ್ವ** 'ಉಱುವ' ನೋ.

**ಉರ್ವಟಿ** (ನಾ). ೧. ಕರು. ೨. ವರ್ಷ. ೩. ಧ್ವನಿ; ಸಪ್ಪಳ. [ಸಂ.]

**ಉರ್ವರ, ಉಬ್ಬರ** (ನಾ). ೧. ಹೆಚ್ಚಿಗೆ ; ಅತಿಶಯ : ಹರನುರಿಗಣ್ಣ ಕಾಯ್ಪು ಸಿಡಿಲೆಟ್ಟಿರಮುರ್ಬಿಪ ಬಾಡಬಾಗ್ನಿಯುರ್ವರಮುಱಿಯಟ್ಟೆ ಕೊಳ್ವ ಕುಳಿಕಾಹಿಯ ಕೋಳ ಪೊಡರ್ಪು (ಶಾಪಮುಂ. ೧೯೦-೧೦೬೦ ; 1189). **ಉಬ್ಬರ** : ೧. "ಉಬ್ಬರಂ, ಉಬ್ಬಟಿ . . . ಪೆರ್ಚುಗೆ — ಈ ೧೯ ಅತಿಶಯಂ" (ಕಶಸಾ. ೧೨-೨೩೪) ; ಬಱಸಿಡಿಲೆಱಪಂತಿರೆ ಬಂದೆಱಗಿದರಂತಳ್ತು ಬಾಳ ಕೀೞ್ಮೊನೆಯಿಂ ತಳ್ತಱದಱಿದುಬ್ಬರಮೆಂಬಿವನಱಿದಿಱಿದರ್ ಪೆಣಬಣಂಬೆಗಳ್ ನೆಗೆವಿನೆಗಂ (ಪಂಪಭಾ. ೧೦-೮೨) ; ಪಾಪದುಬ್ಬರದಿಂ ದೈವವಿರಕ್ತಿ ಸಂಭವಿಸುಗುಂ (ಲೋಕೋಪ. ೪-೨) ; ನಾನಾ ಕ್ರೀಡೆಯಿಂದಿರ್ವರುಂ ತಱಿಸಂದುದ್ಧತ ಭಾವದುಬ್ಬರದಿನೇನುದ್ವೃತ್ತರಾಗಿರ್ದರೋ (ಸುಕುಮಾ. ೨-೬) ; ಕೃಪನುಬ್ಬರದ ಗರ್ವವ ಮುಱಿದು ಕೃತವರ್ಮಕನ ನೋಯಿಸಿದ (ಕುವ್ಯಾದ್ರೋ. ೫-೨೬) ; ಉಬ್ಬರದ ದುಗುಡದ ಬಂಧನವ ಪರಿಹರಿಸಿ (ತೊರರಾ. ೧-೪-೧೩). ೨. ಆಡಂಬರ; ಸಂಭ್ರಮ; ಸಡಗರ: ಸೂಳೆಗೇರಿಯಂ ಪೊಕ್ಕು ತಾಂ ಮಾಬ್ಬುಬ್ಬರಕ್ಕೆ ಅಬ್ಬರಂ ಪಿರಿದಾಗೆ (ಧರ್ಮಾಮೃ. ೨-೪೩ ವ) ; ಮುಂಭಾಗದಲಿ ವಿಜಯದುಬ್ಬರದ ಭಟರೈತಂದರು (ತೊರರಾ. ೬-೨೮-೬೯) ; ಬಿನ್ನಣಂ ಪಾಱಿತು ಪಾಳಿ ಬರ್ದು ಕೆಲಸಾರ್ದುದು ಕೈಮೆ ಕಬಿಲ್ದುದುಬ್ಬರಂ ತಾಱಿತು (ಚಿಕವಿ. ೬-೨೦೯). ೩. ಉದ್ವೇಗ; ಆವೇಗ; ವೇಗ: ಪರಕಾಂತಾನಿಕರಕ್ಕೆ ಸೋಲ್ತುಮನಮಂ ಸಂತೈಸಲೇನಾಱದುಬ್ಬರದಿಂದುಬ್ಬರ ಮಾಗೆ ಕೂಡಿ (ಧರ್ಮಾಮೃ. ೧೩-೧೩೫) ; ಜೋಡಿಸಿದರುಬ್ಬರದ ಮದಗಜವ (ಕುವ್ಯಾದ್ರೋ. ೩-೨) ; ಕೂಗಿ ಬೊಬ್ಬಿಱಿದರುಬ್ಬರ [ದ] ಸಿಡಿಲ್ಕೋಟಿ ಜೊತ್ತಾಗಿ ಗರ್ಜಿಸುವಂತೆ (ಮೋಹತ. ೩೫-೧೯) ; ಮುದದೆ ಕೋಲುಗಳನು ಪೊಯ್ಯುಬ್ಬರಕೆ ಮಿಗೆ ಮೇಲುದು ಜಾಱೆ (ಕಂನವಿ. ೨೧-೧೧೧). ೪. ಏರಿಕೆ ; ಉಕ್ಕಿ ಹರಿಯುವಿಕೆ; ಭರತ: ನದಿಗಳುಬ್ಬರಮುಡಗಿ ತಿಳಿದು ಪರಿದುವು (ಜೈಮಿಭಾ. ೨೫-೩). 'ಉಬ್ಬರವಿಳಿತ' ಪರಾ. ೫. ಉಬ್ಬುವಿಕೆ; ಬಾತುಕೊಳ್ಳುವಿಕೆ: "ಆನಾಹಃ, ವಿಬಂಧಃ – ಹೊಟ್ಟೆಯುಬ್ಬರ" (ಸಿದ್ಧಾಂತಿ. ೧೬೦) ; "ಉಬ್ಬರ – ಬಾಯುವಿಕೆ" (ಜಾನಕೋ. ೨೦).
[ದೇ. ‖ ತುಳು. ಉಬರ್, ಉಬೆರೆ = ಮಂದವಾಗು, ದಟ್ಟವಾಗು ; ತೆಲು. ಉಬ್ಬರ. / ಪ್ರಾ. ಉವ್ವರ = ಘರ್ಮ, ತಾಪ]

**ಉರ್ವರಾಜಿತ** (ನಾ). ಭೂಮಿಯನ್ನೆಲ್ಲಾ ಜಯಿಸಿದವನು : ಸುತ್ರಾಮಜಿತನು ನೃಜಿತನು ಉರ್ವರಾಜಿತನು . . . ಕೂಡಲ ಸಂಗಯ್ಯನು (ಬಸವ. ೯೫೪). [ಸಂ.]

**ಉರ್ವರಾಪಾಳ** (ನಾ). ದೊರೆ ; ರಾಜ : ಉರ್ವರಾಪಾಳನಿನಿಟ್ಟ ಪಾಸರ ಚತುಸ್ತ್ರಿಕ ಮಾತ್ರದೊಳಾವುಪಾಯದಿಂ ಮೇಳಿಸಿ ತಂದು ಕೊಂಡುಕುಡುವೆಂ (ಸುಕುಮಾ. ೭-೯). [ಸಂ. ಉರ್ವರಾಪಾಲ]

**ಉರ್ವರಾಮರ** (ನಾ). ಭೂಸುರ ; ಬ್ರಾಹ್ಮಣ : ಉರ್ವರಾಮರ ಸಭಾಭ್ಯಂತರ ಲೋಹಾಸನಸ್ಥಿತಂ (ಸುಕುಮಾ. ೫-೭ ವ).
[ಸಂ. (ಉರ್ವರಾ + ಅಮರ$_3$)]

**ಉರ್ವರಾವಳಯ** (ನಾ). ಭೂಮಂಡಲ : ಅಂಭೋಧಿಯುಂ ರವಿಯುಂ ಚಂದ್ರನುಮುರ್ವರಾವಳಯಮುಂ ನಿಲ್ವನ್ನೆಗಂ (ಎಕ. II, ೩೪೫-೫೯ ; 1159). [ಸಂ. ಉರ್ವರಾವಲಯ (ಉರ್ವರಾ + ವಲಯ)]

**ಉರ್ವರೆ** (ನಾ). ೧. ಭೂಮಿ ; ನೆಲ : ಸಪ್ತಾಬ್ಧಿ ಸಮುದ್ರಿತೋರ್ವ್ವರೆಗೊರ್ವ್ವಂ ಪತಿ (ಎಇ. XXVII, ೫-೧೦ ; 1082) ; ಉರ್ವರೆಯ ಧನಮೆಲ್ಲವುಂ ನಿನಗೆ ಬಸವಣ್ಣ (ಬಸರ. ೫-೧೬೦). ೨. ಸಮೃದ್ಧವಾದ ನೆಲ ; ಫಲವತ್ತಾದ ಭೂಮಿ : ಸರ್ವರ್ತುಕಮೆ ಬನಂ ನೆಲನುರ್ವರೆಯ್ತೆ ಕೊಳಂ ಸಮಂತು ಪೂಗೊಳನೆ ಬಱಿಕ್ಕುರ್ವೀಧ್ರಂ ರೋಹಣಮೆ ಗಡ (ಚಂದ್ರಪು. ೩-೧೦). [ಸಂ. ಉರ್ವರಾ]

**ಉರ್ವರೇಶ್ವರ** (ನಾ). = ಉರ್ವರಾಪಾಳ : ಇರ್ಪತೊಂದುರ್ವರೇಶ್ವರರಂ ನೀಂ ತಱಿದೊಟ್ಟಿದೈ ಪರಶುರಾಮಾಕಾರದಿಂದಚ್ಯುತಾ (ಜಗವಿ. ೧-೬೦).
[ಸಂ. (ಉರ್ವರಾ + ಈಶ್ವರ)]

**ಉರ್ವಸಿ** (ನಾ). ಅಪ್ಸರ ಸ್ತ್ರೀಯರಲ್ಲಿ ಒಬ್ಬಳು : ತೋರಮಲ್ಲಿಗೆಯ ತುಱುಂಬು ರಾಹು ತವೆ ನುಂಗಿದ ಚಂದ್ರನನೊಯ್ಯನೊಯ್ಯನಂದುಗುೞ್ವವೊಲೊಪ್ಪಿರಲ್ ಬಲದೊಳುರ್ವಸಿ [ಪಾಠಾಂ. ರ್ವಿಸೆ] ದೇಸಿಗೆ ದೇಸಿಯಾಡಿದಳ್ (ಪಂಪಭಾ. ೭-೮೭). [< ಸಂ. ಉರ್ವಶೀ]

**ಉರ್ವಾರು** (ನಾ). ೧. "ಸೌತೆಗಿಡ" (ಅಮರ. ಟೀಕೆ) ೨. ಮೆಕ್ಕೆಗಿಡ: "ಉರ್ವಾರುಃ, ಚಿರ್ಭಟಃ–ಈ ೨ ಮೆಕ್ಕೆ" (ಹಲಾಯು. ೩೫–೫೭); "ವಾಕುಳಮೆನೆ ಸೌತೆ ಉರ್ವಾರುಮೆನೆ ಮೆಕ್ಕೆ" (ಮಂಗರಾ. ೪೪–೪೭). [ಸಂ.]

**ಉರ್ವಾರುಕೆ** (ನಾ). = ಉರ್ವಾರು ೨ : "ಉರ್ವಾರುಕಂ ಕರ್ಕಟೀ ನಾಮವಿಶೇಷಂ ಚಿರ್ಬ[ಟಂ] ವಾಳುಕಿಯೆನೆ ಪಡೆಗುಂ" (ವಸ್ತುಕೋ. ೩೮–೩೧). [ಸಂ.]

**ಉರ್ವಿ** (ನಾ). ೧. ಭೂಮಂಡಲ; ನೆಲ : ಸಚರಾಚರೋರ್ವಿಯೊಳೆ ನಿನ್ನ ಚರಿತ್ರಂ ಚಿತ್ರಂ (ಜಿನಾಲೆ. ೩); ಉರ್ವಿಯಂ ಪರ್ವಿ ಪಸರಿಸಿದ ನಾನಾ ನದಿಗಳ ನಡುವೆ (ಹಚಕಾ. ೨–೫). ೨. [ಛಂದ] ಮಗಣವೆಂಬ (---) ಮೂರು ಗುರುಗಳುಳ್ಳ ಅಕ್ಷರಗಣ : ಆಶೀರ್ವಾದದೊಳುರ್ವಿಯುಂ ಪರಬಲಂ ಮುತ್ತಿರ್ದೊಡಾ ತೋಯಮುಂ (ಛಂದೋಂಬು. ೧–೩೭). [ಸಂ. ಉರ್ವೀ]

**ಉರ್ವಿಜ** (ಗು). ೧. ಭೂಮಿಯಲ್ಲಿ ಹುಟ್ಟಿದ; ನೆಲದಲ್ಲಿ ಬೆಳೆದ. (ನಾ). ೨. ಮರ; ಗಿಡ. [ಸಂ. ಉರ್ವೀಜ]

**ಉರ್ವಿತಳ** (ನಾ). ಭೂಮಂಡಲ : ಖಿಳ ವೇದಂಗಳನೊಯ್ದುರ್ವಿತಳಮಂ ತಾಂ ಚಾಪೆವೊಲ್ ಸುತ್ತಿದಂ (ಸೋಮೇಶ. ೪೪). [ಉರ್ವಿ + ತಳ$_2$ (= ತಲ$_1$)]

**ಉರ್ವಿಧರ** (ನಾ). = ಉರ್ವೀಧರ : ಉರ್ವಿಧರದಗ್ರದಲಿ ದೇಹಮುರ್ವಿಯಾತ್ಮನ ಕಾಂತಿಯಲಿ ಮುಕ್ತೂರ್ವಿಗೈದೇನಿರಘನಿರುಪಮ ನಿಗಮನಾಗುವನೂ (ಬಿಜ್ಜಪು. ೧೯–೬೦). [ಸಂ. ಉರ್ವೀಧರ]

**ಉರ್ವಿನಂ, ಉರ್ಬಿನಂ** (ಅ). ಅತಿಶಯವಾಗಿ; ಹೆಚ್ಚಾಳವಾಗಿ :"ಅಣಿಯರಮುಬ್ಬಿಡಿಗಮುಗುಂದಲೆಯುರ್ವಿ[ಪಾಠಾಂ.ರ್ಬಿ]ನಂ ನೂಳದೆಂದು ಪಿರಿದೆಂಬರ್ಥಂ" (ಕಬ್ಬಿಕ್ಕೆ. ೮೩); ಲತಾಂಗಿ ಸುಗ್ಗಿಯಬ್ಬರಸಿಗಮುರ್ವಿನ ದೊಸಗೆ ಪುಟ್ಟೆ ಪುಟ್ಟದ ತನೆಯನತಿಪ್ರಕಟವಿಶದಯಶನೆಜೆಯಂಗ (ಮೈಆರಿ. ೧೯೩೯, ೩೭–೧೪; 1096). **ಉರ್ಬಿನಂ** : "ಉರ್ಬಿನಂ ಪಿರಿದು" (ಶಮದ. ಪರಿ ೨). [ಉರ್ವು + ಇನಂ (< ಇನ್ನಂ)]

**ಉರ್ವಿಪ** (ನಾ). ದೊರೆ; ರಾಜ : ಅತಿಶಯಧವಳೋರ್ವಿಪೋದಿತಾಳಂಕೃತಿ ಮತಿ ನೀತಿ ನಿರಂತರ ಪ್ರತೀತಂ (ಕವಿರಾ. ೧–೧೪೭). [ಸಂ. ಉರ್ವೀಪ]

**ಉರ್ವಿಸು, ಉಬ್ಬಿಸು, ಉರ್ಬಿಸು** (ಕ್ರಿ). ೧. ಪ್ರಬಲಿಸು; ಅತಿಶಯವಾಗು; ಹೆಚ್ಚು : ನೆಲದೊಳ್ ಬಿಟ್ಟುದಗಿಂಡೆಯಾಗೆ ನೆಜನಂ ನಟ್ಟುರ್ಚಿ ದುಗ್ರಾಯುಧಾವಲಿಯಿಂದುರ್ವಿಸುವಿಂದ್ರಜಾಲಿಗನವೋಲ್ (ಶಾಂತಿಪು. ೭–೪೯); ಉರ್ವಿಸುವ ಬೇಸಗೆಯೊಳ್ ಗುಡಮಿಶ್ರಂ ತಾನದು ದೋಷವಿನಾಶನಂ (ಲೋಕೋಪ. ೯–೨೧೭); ಅನಿಳನುರ್ವಿಸಿ ತೀಡೆ (ಜಗವಿ. ೪–೩೯). ೨. ಹೆಚ್ಚಿಸು; ಅಧಿಕವಾಗಿಸು : ಕರಗಿಸುವಂತೆ ಗರ್ವ ಘನಜಾಳಮಂ ಉರ್ವಿಸುವಂತೆ ಕಾಮ ತೋಮರ ಜನಿತಾಗ್ನಿಯಂ (ಪುಷ್ಪಪು. ೨–೨೫); ಮೇಳಂಗೈದುರ್ವಿಸುತೆ ಶ್ರುತಿಯಂ ವೀಣೆಯಂ (ರಾಜಶೇ. ೧೧–೮೭); ಕವಿಗಳ್ ಮೋದದಿನುರ್ವಿಸುವುದೀ ಪ್ರಬಂಧಮನಿಳೆಯೊಳ್ (ಯಾದವ. ೧–೨೩). **ಉಬ್ಬಿಸು** : ೨. ಹೊಸ ಮಸೆಯ ಹೊಗರಂಬುಗಳ ನೆಬ್ಬಿಸಿದನುಬ್ಬಿಸಿದನು (ಕುವ್ಯಾದ್ರೋ. ೧೫–೬೧); ಪಣೆಗಣ್ಣುರಿಯನುಬ್ಬಿಸಿ ತನುವನೊಡ್ಡಿದನಭವ (ತೊರರಾ. ೩–೨–೩). **ಉರ್ಬಿಸು** : ೧. ಮನುಜರದ್ಭುತಚಿತ್ತರಾಗುತ ತನತನಗೆವುರ್ಬಿಸುತಪಿರಲು (ಬಸಪು. ೫೭–೮). ೨. ದೋರ್ಬಲವದ್ದಂ ಡೇಶರಿಂದುರ್ಬಿಸುವ ಪೆಸರ ಸಾಮಂತರಿಂ (ಕುಸುಮಾ. ೩–೨೨). [ಉರ್ವು$_1$ + –ಇಸು$_3$]

**ಉರ್ವೀಚಕ್ರ** (ನಾ). ಭೂಮಂಡಲ : ಜ್ಞಾನರ್ಧಿಸಂಪನ್ನರುರ್ವೀಚಕ್ರಸ್ತುತಪಾದಪಂಕಜರ್ (ಸುಕುಮಾ. ೧–೧೭). [ಸಂ. (ಉರ್ವೀ + ಚಕ್ರ)]

**ಉರ್ವೀಚರ** (ನಾ). ನೆಲದಮೇಲೆ ಸಂಚರಿಸುವ ಪ್ರಾಣಿ; ಭೂಚರ: ಆಗಸದೊಳ್ ಪಣ್ಣಿದ ಪೊನ್ನ ಪಣ್ಣೆಗೆಯಿಭಂಗಳ್ ಚಿಹ್ನಮುರ್ವೀಚರಪ್ರಸರಕ್ಕುರ್ವಿಯೊಳ್ (ಶಾಂತಿಪು. ೫–೩೮). [ಸಂ. (ಉರ್ವೀ + ಚರ)]

**ಉರ್ವೀಜ** (ನಾ). = ಉರ್ವಿಜ : ವನದೊಳ್ ಮದೀಯ ಪಿತೃಗೆಂತುಂ ವೈರಮುರ್ವೀಜರಾಜಿಗಳೊಳ್ (ಪಂಚಾನೂ. ೧೧–೧೨೭). [ಸಂ.]

**ಉರ್ವೀಧರ** (ನಾ). ೧. ಬೆಟ್ಟ; ಪರ್ವತ : ಏನೆಸೆದುದೋ ತನ್ಮಂದರೋರ್ವೀಧರಂ (ಸುಕುಮಾ. ೧–೬೫). ೨. ಆದಿಶೇಷ. [ಸಂ.]

**ಉರ್ವೀಧ್ರ** (ನಾ). = ಉರ್ವೀಧರ ೧ : ಉರ್ವೀಧ್ರ ರೋಹಣಮೆಗಪಾ ವರ್ಣಸಲಜಾವರಣ್ಣ ತಜ್ಜನಪದಮಂ (ಚಂದ್ರಪು. ೩–೧೦). [ಸಂ.]

**ಉರ್ವೀಪಾಲಕ** (ನಾ). ದೊರೆ; ರಾಜ : ತದುರ್ವೀಪಾಲಕಂಗಿಷ್ಟಸುಂದರಿಯರ್ ಸುಂದರ ರೂಪೆಯರ್ ಸೊಬಗೆಯರ್ ಕೂರ್ತಿರ್ಪರುರ್ವೀಶ್ವರಾ (ಶಾಂತಿಪು. ೫–೨೨). [ಸಂ. (ಉರ್ವೀ + ಪಾಲಕ)]

**ಉರ್ವೀಭರ** (ನಾ). ಭೂಮಿಯ ಭಾರ; ರಾಜ್ಯಭಾರ : ಸೀಸೊರ್ವರ್ ಖಚರೇಶ ಪೊತ್ತುನಿಂದಿರ್ ದೊರೆವೆತ್ತು ರ್ವೀಭರಮಂ (ಶಾಂತಿಪು. ೫–೮೪); ಅರಮನೆಗೆ ಪೋಗದುರ್ವೀಭರಮಂ ನಂದನನೊಳಭಯರುಚಿಯೊಳ್ ಸಂದಿಸಿ ತಾಂ ಜೈನದೀಕ್ಷೆಯಂ ಕೈಕೊಂಡಂ (ಯಶೋಚ. ೪–೬೪). [ಸಂ.]

**ಉರ್ವೀರುಹ** (ನಾ). = ಉರ್ವಿಜ : ಮುಳಯೋರ್ವೀರುಹ ಕುಂಕುಮದ್ರವಯುತಂ . . . ಗಂಧೋದಕಂ (ಅಜಿಪು. ೪–೭೨). [ಸಂ.]

**ಉರ್ವೀಹರ್ಷ** (ನಾ). ಭೂಮಂಡಲಕ್ಕೆ ಆನಂದವುಂಟುಮಾಡುವವನು : ಸ್ತುತಿಗೆಯ್ವಂ . . . ಚತುರೋಕ್ತಿ ಪ್ರಚುರಾರ್ಥ ಕಾವ್ಯಜನಿತೋರ್ವೀಹರ್ಷನಂ ಹರ್ಷನಂ (ಜಗವಿ. ೧–೮). [ಸಂ. (ಉರ್ವೀ + ಹರ್ಷ)]

**ಉರ್ವು$_1$, ಉಬ್ಬು$_1$, ಉರ್ಬು$_1$, ಊರ್ವು** (ಕ್ರಿ). ೧. ಉಂಟಾಗು; ಹುಟ್ಟು; ಮೇಲೆ ಏಳು : ಭಟರ್ಕಳ ರೌದ್ರಮುಪ್ಪ ಕೆಯ್ದುಗಳಿನಗುರ್ವಿನದ್ಭುತದಿನುರ್ವಿದ ಕೆಂಗಿಡಿಗಳ್ (ಪಂಪಭಾ. ೧೦–೩೫); ಪರಿವೆಳ್ದಿಂಗಳ ಬೆಳ್ಪೊನಲೊಳುರ್ವಿದ ಬೊಬ್ಬುಳಿಕೆಗಳಂತೆ ತಾರಗೆಗಳ್ ತಲೆಗರೆಯೆ (ಕಾದಂಉ. ೪೨೯); ಕಟಕಾಂಚೀಸುಸ್ವನಂ ಪೊಣ್ಮೆ ಕಂಕಣಝೋಂಕಾರಮುರ್ವೆ . . . ಕೂಡಿದರ್ (ಉದ್ಭಟ. ೮–೨೨೦); ಬರಿಪೊಯ್ಯುರ್ವೆ ನಿಮಿರ್ಚೆ ಬಿಕ್ಕುಳಿಕೆ ಮೆಯ್ಯ್ ಮುಯ್ಯಾಗೆ ಕಂಪಕ್ಕೆ (ರಸರ. ೪–೧೯೦). ೨. ಹೆಚ್ಚು; ಮೀರು; ಬೀಗು; ಅಗಲಿಸು; ವೃದ್ಧಿಯಾಗು: ಹಿಮಾಚಳಮಾಯ್ತೆಂಬಿನಮುರ್ವಿ ಪರ್ವಿ ಪರಿದತ್ತು (ಆದಿಪು. ೭–೧೦೦); ಉರ್ವಿ ಕೊರ್ವಿ ಪರ್ವಿದ ಮುರ್ವಿಂದೆ ಗರ್ವಿಸುತ್ತ (ಗಿರಿಕ. ೨–೧೦೫ ವ); ಶಾರ್ದೂಲವನೆಚ್ಚೊಡೊಡೆಹಾಯುತುರ್ವಿ ಚಂದನವತಡೆಗಡಿಯಲುಸುತ್ತಿ ಕೊಂಡಿರ್ದ ನಾಗರ ಹೆಡೆವಣಿ ಸುರಿದುವೇನೆಂಬೆ (ಸೋಹತ. ೧೯–೨೫). ೩. ಹಿಗ್ಗು; ಸಂತೋಷಿಸು : ಪರಿಜನಮುರ್ವೆ ಬಂಧುತತಿ ಕೊರ್ವೆಯಶೋಲತೆ ಪರ್ವೆ (ಪುಷ್ಪಪು. ೧೨–೧೧೦); ಹರ್ಷಮನಾನುತುರ್ವುತುಂ (ದಿವ್ಯಸೂ. ೬–೩೩). ೪. ಗರ್ವಿಸು; ಅಹಂಕಾರ ಪಡು: ಗರ್ವಿಯೋಗಾಚಾರಬುದ್ಧಿಮಾತ್ರವನೆ ಬಗೆದುರ್ವದಿರು (ಪದ್ಮರಾ. ೧೧–೧೯೭). **ಉಬ್ಬು$_1$**: ೧. ಬೊಬ್ಬೆಯಾರ್ಭಟೆ ಬಾಣ ಬಿಡುವ ಕೋವಿಯೊಳುಬ್ಬಿತೀವಿದ ಬಲಧೂಮ ಉಬ್ಬಲಾಗಸಕಾಗ ಕೆಸರೆಯ ಮುತ್ತಿದ ಹೆಬ್ಬಲವನು ತುಡುಕಿದರು (ಕಂಠವಿ. ೩–೭೩). ೨. ಜಲನಿಧಿಯುಬ್ಬಿದವೊಲು (ಕುವ್ಯಾಭೀ. ೧–೪೨); ಉಬ್ಬಿ ಬೆಳೆದು ಬಾಗಿತು (ಭರಚ. ೧–೪೦). ೩. ಉಬ್ಬಿರ್ದ ಬೇಡರ ಗರ್ವದಗುರ್ವಂ ಕೆಡಿಸಿ (ಧರ್ಮಾವ್ಯ. ೧–೨೧೦); ಉದ್ಗತಾನಂದಮಂ ನೂಂಕಿ ನೆನೆದುಬ್ಬುವಂ (ಬಸರ. ೩–೧೫೦); ಕೋಕಿಳ ಮಂಜುನಿನಾದಮಂ ನೆಗಟಿ ಪಂಡಿತವಕ್ಕಿಗಳುಬ್ಬೆ . . . ಬಂದುದು ಚೈತ್ರಂ (ಉದ್ಭಟ. ೯–೩).

**ಉರ್ಬು$_1$** : ೧. ಉರ್ಬಿ ಕಾರ್ಮುಗಿಲ ನೀರ್ವೊಲ್ ಕೋಶದಿಂದಂ ಮದಂ ಸುರಿಯುತ್ತಿರ್ಪುದುಂ (ಆದಿಪು. ೧೨-೫೮) ; ಉರ್ಬಿ ಮರ್ಬು ಪರ್ಬಿತ್ತಾಗಳ್ (ಕಾದಂಪೂ. ೨೮೨). ೨. "ಉರ್ಬು — ಉತ್ಸಾಹೋದ್ವರ್ತಸಂಯೋಃ" (ಶಮಧಾ) ; ಪೆಂಪಿಂದಮುರ್ಬಿದ ಗುಣ್ಪಿಂದಮಿದಬ್ಧಿಗಗ್ಗಳಮೆನಲ್ (ಆದಿಪು. ೧-೫೫) ; ಒಳ್ನುಡಿವೊಂದಬ್ಬರಮುರ್ಬಿತು (ಕಾದಂಪೂ. ೧೫೯) ; ಪರಿತರ್ಪ ಕಾಲ್ಗಳೊಳ್ . . . ಸುೞಿದಾಡಿ ಮತ್ತೆಯುಂ ಕಳೆಯಲಿನಿತ್ತುಮಾೞಳವಳುರ್ಬಿದ ತನ್ನಯ ಮೆಯ್ಯ ಬೆಂಕೆಯಂ (ಕಬ್ಬಿಕಾ. ೩೧೬). ೩. ನೀಲಕಂಠದೇವನಂ ಬಳಿಕ್ಕಮುರ್ಬಿ ಕೊಂಡಾಡುತುಂ (ಉದ್ಭಟ. ೧೨-೧೦೬) ; ಗರತಿಗೆಲಸವೆಂದು ಗೆಲ್ಲಗೊಂಡುರ್ಬದೆ ಪರಿಚಾರವೆಂದು ಪಳಿಯದೆ (ಹದಿಬ. ೩-೩೩). ೪. ಉದ್ದವಾಡು ; ನಿಮಿರಿಸು : ಪಲ್ಗಿರಿದು ಪುರ್ಬನುರ್ಬಿ ಬೆರಲ್ಗೊನೆಯಿಂ ತುೞಿಸಿ . . . ಬಿಸಿಲ್ಗಾದುದ ದೊಂದು ಮರದ ಕೋಡೊಳ್ ಕೋಡಂ (ಜಗವಿ. ೧೪-೧೧). **ಊರ್ವು** : ೨. ನಳಿತೋಳು ಸುಳಿಗುರುಳು ಮುಂತೂರ್ವಿ ಬೆಳೆದ ಪೆರ್ಮೊಲೆಯ . . . ಅಬಲೆಯರು ಕಣ್ಗೆಸೆದರು (ಪ್ರಭುಪು. ೩-೨೨). [?]

**ಉರ್ವು$_2$, ಉಬ್ಬು$_2$, ಉರ್ಬು$_2$** (ನಾ). ೧. ಏಳಿಗೆ; ಅಭಿವೃದ್ಧಿ ; ಅತಿಶಯ; ಉನ್ನತಿ : ಅವನಿತಳಂ ಕ್ಷಾಂತಿಯೊಂದುರ್ವರ್ನ್ (ಎಇ. XIII, ೩೩೦-೭ ; 929) ; ಉರ್ವಿನ ಕಲಿತನಕ್ಕೆ ದುರ್ಯೋಧನನುಂ ಭೀಮನೊಳೆ ಸೆಣಸಿ ಗದೆಯಂ ಕಲ್ತಂ (ಪಂಪಭಾ. ೨-೫೯); ಬಿಸಿಲುರ್ವಿಂದಳ್ಕಿ ಬೆಂಬೀೞದೆ (ಧರ್ಮಾಮೃ. ೧೧-೨೦೧). ೨. ವೇಗ ; ರಭಸ : ಬೆಂಕೆಯ ಪೊಯ್ದುರ್ವಿನೊಳೆ ಕೊರಗಿರ್ದ ಲತೆಗಳ ಕೊನೆಕೊನೆಯನೆ ದಹನನಳುರ್ದು ಕೊನೆಗೊನೆಗೊಂಡಂ (ಪಂಪಭಾ. ೫-೮೭). **ಉಬ್ಬು$_2$**: ೧. ತೆಗೆದುದಾಚೆಯಲವರ ಬಲ ಜಗದಗಲದುಬ್ಬಿನ ಬೊಬ್ಬೆಯಲಿ (ಕುವ್ಯಾಶ. ೧-೭) ; ವನಜದಳಾಯತೇಕ್ಷಣೆ ಮಂಡಿಸಿದಳು ಘನಪರಿತೋಷದುಬ್ಬಿನಲಿ (ಮೋಹತ. ೨೭-೩೨). ಬಿಸಜಗಂಧಿಯ ನಿಡುಪುರ್ಬು ಕುಸುಮಶರನ ಸಿಂಗಾಡಿಯುಬ್ಬು (ಕಂನವಿ. ೯-೩೫). ೩. ಹಿಗ್ಗು ; ಉತ್ಸಾಹ : ಜಾಜಿದುಬ್ಬಿನ ಹೊತ್ತು ದುಗುಡದ ಮೋಜಿಗಳ ಮೋನ (ಕುವ್ಯಾಕ. ೬-೨೫) ; ಧುರಗಲಿಗಳು ದುರ್ಗದಾಳ್ವೇರಿಯಮೇಲೆ ಪರಿಶೋಭಿಸಿದರುಬ್ಬಿನಲಿ (ಕಂನವಿ. ೧೧-೧೪೪). ೪. ಗರ್ವ ; ಅಹಂಕಾರ ; ಹೆಮ್ಮೆ : ಗಾಜುಗೆಡೆದೆನು ನಿಮ್ಮನೋಲೆಯಕಾಜತನದುಬ್ಬಿನಲಿ (ಕುವ್ಯಾದ್ರೋ. ೧-೨೪) ; ಉಬ್ಬು ಮುಜಿದು ಖಾನರು ಹಿನ್ನೆಲೆಗೈದಿ ತಬ್ಬಿಬ್ಬುಗೊಂಡರಾಕ್ಷಣದೆ (ಕಂನವಿ. ೧೪-೯೧). **ಉರ್ಬು$_2$**: ೧. ತನು ರೂಪ ವಿಭವ ಯೌವನ . . . ಇಂದ್ರನ ಬಿಲ್ ಬೊಬ್ಬುಳಿಕೆಯುರ್ಬು ಪರ್ಬಿದ ಭೋಗಂ (ಆದಿಪು. ೯-೪೬); ಅಂಬರಮಂ ಬಿಸುಟುರ್ಬಿನಂಧಕಾರಂ ಕವಿತರ್ಪಿನಂ ಕುರುಕುಲಾರ್ಕನುಮರ್ಕನುಮಸ್ತಮೆಯ್ದಿದರ್ (ಗದಾಯು. ೯-೩೫) ; ಭೋರ್ಗರೆವ ರವದುರ್ಬಿನಿಂ ಪರ್ಬಿನಿಂ (ಚಬಪು. ೪೯-೨೯). ೨. ನೆಗೆದುರಿಪೌರ್ವಾನಳನುರ್ಬುಗಳೆನಲುಂ ನೆಗೆದುವಹಿಮಹಿಮಕರಬಿಂಬಂ (ಆದಿಪು. ೬-೫೨). ೩. ಭೂಪರಾನಂದದೆ ಛತ್ರ ಚಾಮರದ ತಿಂತಿಣಿಯೊಳ್ ನಡೆತಂದು ಚಿತ್ತದುರ್ಬೊಂದಿರೆ (ದಶಕು. ೮-೨). ೪. ಮದಸೊರ್ಕಿದಾನೆಯಂತೆ ತನ್ನಿಚ್ಚೆಯಿಂ ಬೀೞ್ವನಿತು ವಿಸಟಂಬರಿವಂ ಆವುರ್ಬಿಂದೊಂದು ಬಾರಿ ದುಃಖಂಬಡೆವಂ (ಪಂಚತಂ. ೧೦೫-೧೮) ; ನಾಂ ಮುನಿದೊಡಂ ಜವಂ ಮುಳಿದೊಡಮುರ್ಬಿನೊಳಾಂತು ಸೆಣಸಿ ಕಾದುವ ಜನಪಂಗೆಂಟಿರ್ದೆಯೆ (ಧರ್ಮಾಮೃ. ೪-೨೫೧) ; ನಿರ್ಬಂಧಿಸಿ ಸಂಕಲೆಯಂ ಸರ್ಬಾಂಗದೊಳಿಕ್ಕಿ ಕಡಲ ನಡುನೀರೊಳ್ ತನ್ನುರ್ಬಿೞಿಯೆ ಬಿಸುಟು ಬಾಯೆಂದೊರ್ಬನ ಕೆಯ್ಗಿತ್ತನ್ (ದಶಕು. ೧೨-೫೦).

ಉಬ್ಬುಡುಗು = ಗರ್ವ ಅಡಗು ; ಹೆಮ್ಮೆ ಇಲ್ಲದಂತಾಗು : ಅಂದು ಬಸವಣ್ಣನುಬ್ಬುಡುಗುತಂ ಮೈಯಿಕ್ಕಿ (ಬಸರ. ೧೧-೮೪).

[< ಉರ್ವು$_1$]

**ಉರ್ವುಗೊಳ್** (ಕ್ರಿ). ಉತ್ಸಾಹಗೊಳ್ಳು ; ಹಿಗ್ಗು : ಇದೊ ನಿನ್ನ ಪತಿ ಬಂದನೆಂಬ ನಲ್ನುಡಿ ಕೇಳಿ ಮುದವೇಱಿ ಮೊಗಸಿರಿವಡೆದು ಕದುಬಿಯುವನೆ ಸೇವೆಗನುವಪ್ಪ ವಸ್ತುವನೊದವಿಪುದುರ್ವುಗೊಂಡೊಡನೆ (ಹದಿಬ. ೩-೧೧).

[ಉರ್ವು$_2$ + ಕೊಳ್$_1$]

**ಉರ್ವೇೞ್, ಉಬ್ಬೇಳ್, ಉಬ್ಬೇಳು, ಉರ್ಬೇೞ್** (ಕ್ರಿ). ಉಬ್ಬಿ ಏಳು ; ನೆಗೆದು ಮೇಲಕ್ಕೆ ಏಳು ; ತಲೆದೋರು : ಬಿೞ್ದ ಭರದಿಂದೆ ವಾರಿಯೆರಟಿದ್ದೆಸೆಗಂ . . . ಬಿೞ್ದುದು ತದ್ರಭಸಕ್ಕುರ್ವೆೞ್ದು [ಪಾಠಾಂ. ರ್ಬೆೞ್ದು] ಕಡಂಗಿದುವು ಜಳಚರ ಪ್ರಕರಂಗಳ್ (ಚಂದ್ರಪು. ೫-೪೩) ; ನೆಗೆದೆತ್ತಂ ಗೋತ್ರಶೈಲಂ ತಳರ್ದು ಮಸಕದಿಂ ತಾಗಲುರ್ವೆೞ್ದುವೋ ವಾರ್ಧಿಗಳುಂ ದ್ವೀಪಂಗಳುಂ (ವರ್ಧಪು. ೮-೪೫). **ಉಬ್ಬೇಳ್** : ಉಬ್ಬೇಳ್ವ ರೋಷಜ್ವಾಲೆ ಹೊದಸಿತು ವದನವನು (ಕುವ್ಯಾಕ. ೧೭-೧) ; ಮೇಗೆ ಮೇಗುಬ್ಬೇಳ್ವ ಸುಯ್ಲಿನ (ತೊರರಾ. ೩-೮-೫೨). **ಉಬ್ಬೇಳು** : ಕೂಡೆ ವಾನರ ಕಟಕ ಬೊಬ್ಬೆಯ ಗಾಡಿಕೆಯಲುಬ್ಬೇಳುತಿರ್ದುದು (ತೊರರಾ. ೬-೧೦-೨೫) ; ಆವೇಶವು ಹೆಚ್ಚಿತು . . . ದುರುಳತನವು ಉಬ್ಬೆದ್ದಿತು (ರಾಜಸೂ. ೯೪). **ಉರ್ಬೇೞ್** : ಮೆಲ್ಲಡಿಯಂ ತಳ್ಪೊಯ್ದು ಮಂಜೀರದ ಮೃದುರವಮುರ್ಬೇೞೆಯುಂ ರಮ್ಯ ರಮ್ಯಂಬಡೆದುದ್ಯತ್ಕಂಕಣಾಂತರ್ಝಣರುತಿವೆರಸಾಗಳ್ ವರಸ್ತ್ರೀವಿತಾನಂ ಬಿಡದೇೞಲ್ಕೆೞ್ದನಾಗಳ್ (ಕುಸುಮಾ. ೮-೧೫೦). [ಉರ್ವು$_1$ + ಏೞ್$_1$]

**ಉಲಂಡಿ, ಉಲಾಂಡಿ** (ನಾ). ಲಂಗರಿನಂತೆ ದೋಣಿ ಚಲಿಸದಂತೆ ಮಾಡುವ ಕೊರಡು : ದೋಣಿಗಳಿಗೆ 'ಉಲಂಡಿ' ಎಂಬ ತೋಲು ಹಿಡಿಯುವ ಕೊರಡನ್ನು ಒಂದು ಬದಿಗೆ ಕಟ್ಟಿ ನೀರೊಳಗೆ ಹಾಕುವರು (ಕಭಾಗ. ೩೦೮). **ಉಲಾಂಡಿ** : ಬಹು ಸಣ್ಣ ದೋಣಿಗಳ ಅಡ್ಡ ಮಗ್ಗುಲಿಗೆ "ಉಲಾಂಡಿ"ಯೆಂಬ ತೋಲು ಹಿಡಿಯುವ ಕೊರಡು ಕಟ್ಟಿ (ಕಭಾಗ. ೧೮೩). [← ಮರಾ. ಉಲಂಡಿ, ಉಲಾಂಡಿ]

**ಉಲಕೆ** (ನಾ). ಆಕಾಶದಿಂದ ಬೀಳುವ ತೇಜಃಪುಂಜವಾದ ವಸ್ತು : ಆಕಾಶದಲ್ಲಿ ಸಂಚರಿಸುವ ಉಲಕಗಳು ಹಾದಿ ತಪ್ಪಿ ಚಂದ್ರನ ಮೈಗೆ ಬಡಿದ ಕುಣಿಗಳೇ ಈ ವರ್ತುಲ ಪರ್ವತಗಳು (ಬಾಲಪ್ರ. I, ೧೦).

[< ಸಂ. ಉಲ್ಕಾ]

**ಉಲಕು** 'ಉಲುಕು$_1$' ನೋ.

**ಉಲಕೋಚಿ, ಉಲುಕೋಚಿ** (ನಾ). (ಉಕ). ತುಂಟ ; ಉಡಾಳ ; ಕೇಡಿಗ : "ಉಲಕೋಚಿ–ಕಿಡಗೇಡಿ, ಉಡಾಳ, ತುಂಟ" (ಜಾನಕೋ. ೨೧); ಮಹಾ ಉಲಕೋಚಿ ಅಂದರ ಮಹಾ ಉಲಕೋಚಿ ಆದ ಖೋಡಿ ಇಷ್ಟು ಉಲಕೋಚಿ ಇದ್ದರೂ ಬಹಳ ಹುಷಾರಿ ಮತ್ತ (ವೈನಿ. ೨೦) ; ಹೊರಟಿತ್ತು ಉಲಕೋಚಿ ಆಯುಷ್ಯಯಂತ್ರ ತಿರುತಿರುಗಿ ಹಾಗೇ ತಿರುಗಿ ನೀರಸವು (ಮುಕ್ತಕಂ. ೫೯-೮). **ಉಲುಕೋಚಿ** : ಓಹೋ ಈ ಉಲುಕೋಚೀ ಹುಡುಗನು ಅತಿವೇಗದಿಂದ ಬಹಳ ದೂರ ಹೋದನು (ಉರಾಚ. ೮೫).

[< ಸಂ. ಉತ್ಕೋಚ ?]

**ಉಲಕೋಚಿತನ, ಉಲುಕೋಚಿತನ** (ನಾ). ತುಂಟತನ ; ಕೇಡಿಗತನ : ಅಯ್ಯ ನಮ್ಮವ್ವ ಅವನ ಉಲಕೋಚಿತನಕ್ಕೇನೂ ಕೊರತೆ ಇಲ್ಲ (ವೈನಿ. ೨೨). **ಉಲುಕೋಚಿತನ** : ಇಂತಹ ಉಲುಕೋಚಿತನವನ್ನು ಮಾಡಿ ದಕ್ಕಿಸಿಕೊಳ್ಳಬೇಕಿದ್ದರೆ ಸಮುದ್ರದಂತಹ ತಾಯಿ ಬೇಕು (ಶ್ರೀರಂಗ. ೨೬). [ಉಲಕೋಚಿ + -ತನ]

**ಉಲಗ** 'ಉಲಿಗ' ನೋ.

**ಉಲಚು** (ಕ್ರಿ). ಕದಡು; ಅಳಿಸು (?) : ಹೆಣ್ಣಿಲ್ಲದಮ್ಮನ ಹೆಣ ಚಂದವಿಲ್ಲವು ಬಣ್ಣದ ನಿರಿಯ ಸೊಸೆದಿರು ತೀಡಿದರ ಕಣ್ಣಿಗೆ ಕಾಡಿಗೆ ಉಲಚವು (ಹಳ್ಳಿಯ. ೧೧೬). [?]

**ಉಲಪ** (ನಾ). ೧. ಪೊದರು; ಪೊದೆ: "ಉಲಪಃ . . . ವಿಟಪಃ — ಈ ೫ ಪೊದಱು" (ಹಲಾಯು. ೩೧-೩೬). ೨. ಒಂದು ಬಗೆಯ ಹುಲ್ಲು: "ಉಲಪಃ . . . ಜಲ್ಬಜಃ — ಈ ೫ ಹಂಜಳದ ಪುಲ್" (ಹಲಾಯು. ೩೨-೩೬). [?]

**ಉಲಪಿ** 'ಉಲುಪೆ' ನೋ.

**ಉಲಾಂಡಿ** 'ಉಲಂಡಿ' ನೋ.

**ಉಲಾರ** 'ಉಲ್ಲಾರ' ನೋ.

**ಉಲಿ$_1$** (ಕ್ರಿ). ೧. ಧ್ವನಿಮಾಡು; ಕೂಗು: ಬಹಿರಂತರುಪವನಂಗಳೊಳ ಹರಹುಮಾ ಪರಭೃತಂಗಳುಲಿವ ರವಂಗಳ್ (ಕವಿರಾ. ೧-೫೮); ಪಥಿಕರ್ ಬರ್ಕೆಂದು ಭೃಂಗಂಗಳಿಂದುಲಿವಂತಿರ್ದುದು ಪಣ್ತ ಬಕ್ಕೆ (ಆದಿಪು. ೧೧-೬೮); ಉಲಿಯೆ ಸುರದುಂದುಭಿಗಳ್ (ಗದಾಯು. ೮-೪೨); ಉಲಿವ ಮಂಗಳತರದ ತೂರ್ಯತ್ರಯ (ತೊರರಾ. ೧-೭-೨೯). ೨. ಮಾತ ನಾಡು; ಹೇಳು; ಘೋಷಿಸು: ಉಲಿವ ಜನದ ಕಳಕಳರವಮುಮಂ ಮೊಱೆಗುವ ಪಱೆಗಳುಮಂ ಬಾರಿಸಿ (ಪಂಪಭಾ. ೨-೭೪ ವ); ನಿಲಿಸ ಲೊಲ್ಲದೆ ಮಾಣ್ದುಱಿದಿರ್ದನಪ್ಪೊಡಂ ನಿಜಸದ ಕೆಪ್ಪನೆಂದುಲಿವರ್ (ಧರ್ಮಾಮೃ. ೪-೧೧೪); ಅಭ್ರದಲಿ ಗುಹ್ಯಕನುಲಿದನೆಲೆ ನಕುಲಾಂಕ (ಕುಮ್ಯಾಆ.೨೩-೧೮); ಸರಳತೆಯ ತೋರಿ ನೀನುಲಿಎನ್ನೊಳು (ಅರುಣ.೧೦).

[ದೇ. ‖ ತಮಿ. ಮಲ. ಕೊಡ. ಒಲಿ; ತೆಲು. ಉಲಿ; ಮಲ್ತೊ. ಒಲ್ಗೆ = ಅಳು]

**ಉಲಿ$_2$** (ನಾ). ೧. ಧ್ವನಿ; ಕೂಗು; ಶಬ್ದ; ರವ: ಒಡನುಲಿದುವು ಬೆರಲ ಕೊರಲ ನಾಲಗೆಯುಲಿಗಳ್ (ಕಾವ್ಯಸಾ. ೬೫೮ ಶೂದ್ರಕ); ಎಸೆವ ವಿಮಾನಘಂಟೆಗಳ ಮೆಲ್ಲುಲಿ (ಆದಿಪು. ೨-೪೧); ಉಲಿವ ಜಲನಿಧಿಯು ಲಿಯಂ (ಪುಷ್ಪಪು. ೧೦-೪೦). ೨. ಮಾತು: ಜಲಶಯನೋದರಾಂತ ರದಿನೀ ತ್ರಿಜಗಂ ಪೊಱಮಟ್ಟುದೀಗಳೆಂಬುಲಿ ಸಲೆ (ಪಂಪಭಾ. ೧೦-೫೨); ಪರಮಾನುಭವಗಳುಲಿಯನುಭವಿಗಳೊಳಕಿವಿಗೆ (ಮುಂಕುಶ. ೨೯).

[< ಉಲಿ$_1$. / ತಮಿ. ಮಲ. ಕೊಡ. ಒಲಿ; ತೆಲು. ಉಲಿ]

**ಉಲಿಕು** 'ಉಲುಕ್ಕು$_1$' ನೋ.

**ಉಲಿಗ$_1$, ಉಲಗ** (ನಾ). ಒಂದು ಬಗೆಯ ಗಿಡ; ಹುಲಿಗಲ ಗಿಡ: ಉಲಿಗನಸೊಪ್ಪಿನ ರಸದೊಳ್ ತಿಲತೈಲಮನೊಂದುಗೂಡಿ ಕುಡಿಸಲ್ ಕಿಡುಗುಂ . . . ಮಹಾಮಯಂ (ಖಮುದ. ೧೪-೫೬); ಹುಣಿಸೆಯ ಹುರು ಪಲು, ಬಿಳಿಯ ತರಗು, ಉಲಿಗನ ಸೊಪ್ಪು, ಆಡುಸೋಗೆ ಇವಂ ಸಮಾನಂ ಗೊಂಡು ಸುಟ್ಟು . . . ಅಜೀರ್ಣಂಗಳಿಗೆ ಕೊಡಲು ಮಾಣುವುವು (ವಿವೈವಿ. ೪೮). **ಉಲಗ**: ಕಾಂಚತೊಂಡೆಯ ಬೇರು . . . ಉಲಗನ ಬೇರಿನ ತೊಪ್ಪಡೆ . . . ರಸದಲ್ಲಿ ತೇದು ನಸ್ಯಮಾಡಲು ಹದಿನಾಲ್ಕು ಬಗೆ ಮೊಲ ನಾಗರವ್ಯಾಧಿ ಗುಣವಹುದು (ವಿವೈವಿ. ೯೯). [< ಹುಲಿಗ?]

**ಉಲಿಗ$_2$** (ನಾ). ವಾಚಾಳಿ; ಹರಟೆಮಲ್ಲ: ಉಂಗರ ಮಾತು ಉಲಿಗರ ತೋಟಿ ಎತ್ತ ಲಿಂಗಾನುಭಾವದ ರಹಸ್ಯದ ವಾಕ್ಯವೆತ್ತ (ಚೆನ್ನವ. ೬೩-೨).

[ಉಲಿ$_2$ + -ಗ$_3$]

**ಉಲಿಗ$_3$** 'ಉೞಿಗ' ನೋ.

**ಉಲಿಗ$_4$** (ನಾ). ಗ್ರಾಮಾಧಿಕಾರಿ; ಊರಿನ ಪ್ರಮುಖ; ಊಳಿಗ ದವನು (?): ಇದಕೆ ಸಾಕ್ಷಿಗಳು ಸಾಮಿಸರು ಗಲುಡಗಳು ಉಲಿಗರು ತೆರಕಣಾಂಬಿ ಹಲರು ಕಳಿಲೆಹಲರು ಹಂಪಪುರದ ಹಲರು (ಎಕ. III, ನಂಜನ. ೧೧೬-೧೪; 1652).

[< ಊೞಿಗ?. / ಮರಾ. ಉಲಿಂಗ = ಸೇವೆ; ಕೆಲಸ]

**ಉಲಿಗುಡು** (ಕ್ರಿ). ಧ್ವನಿಮಾಡು; ಶಬ್ದಮಾಡು: ಗೆಜ್ಜೆ ಮೆಲ್ಲುಲಿಗುಡೆ (ರಾಜಶೇ. ೧೩-೧೦೨). [ಉಲಿ$_2$ + ಕುಡು$_1$ (< ಕೊಡು$_1$)]

**ಉಲಿಗೆ** (ನಾ). ಉಂಡಲಿಗೆ; ಉಂಡ್ಲಕಾಳು (ಕರಾ). ℙ ಹಲಸಿನ ತೊಳೆಯಿಂದ ಮಾಡಿದ ಭಕ್ಷ್ಯ: ಎಳೆವದದ ಹಲಸಿನ ಕಾಯಸೊಡೆ ವೆರಸಿ ಸಂಭಾರಮಂ ತುಪ್ಪವೆಱೆದಟ್ಟು ಬಡಗಸಂಡಿಗೆಯುಲಿಗೆ [ಪಾಠಾಂ. ಯಂತೆ] ಮಾಡಿಯುದ್ದಿನ ಸಂಡಗೆಯೊಳದ್ದಿ . . . ನಸು ಹುಳಿಯನಿಕ್ಕಿ ಪರಿಮಳವಿಡುವುದು (ಸೂಪಶಾ. ೫-೫೨). [?]

**ಉಲಿಪ, ಉಲಿಹ** (ನಾ). ೧. ಧ್ವನಿ: ರಸತರಂಗಿಣಿಯ ತೆರೆಯುಲಿಪದಂತೆ ಮಧುರವಾದ ಪಾರಿವದುಲಿಪಂಗಳುಂ (ಪಂರಾಮಾ. ೩-೭೫ ವ); ನಾನಾ ಜಲಚ್ಚರಿಯುಲಿಪದಿಂದೊಪ್ಪುವ ಹೆಗ್ಗೆಱೆಯಂ ಕಂಡು ಬೀಡಂಬಿಟ್ಟು (ಎಕ. VII, ಶಿವಮೊ. ೪-೩೬; 1122); ಪರಪುಟ್ಟ ಮಯೂರ ಕೀರ ಪಾರಾವತಂಗಳುಲಿಪಮುಂ (ಮಹಾಪು. ೮-೮೧ ವ). **ಉಲಿಹ**: ೨. ಮಾತು: ಆವು ಸತಿಯರಾದೆಪ್ಪೆವೆಂಬುಲಿಹವೆಂಬುದು ಬಂದ ಕಾಲ ಗುಣವೋನಿಂದ ನೆಲದ ಗುಣವೋ (ಹಚಕಾ. ೭-೧೬). [ಉಲಿ$_1$ + -ಪ$_1$]

**ಉಲಿಪು, ಉಲಿವು, ಉಲುಪು, ಉಲುವು, ಉಲುಹು** (ನಾ). ಧ್ವನಿ; ಕೂಗು; ಮಾತು: ಬೇಲಿಯ ಕೆಲದೊಳಲ್ಲದೆ ಪೆಱಗಣುಲಿಪಿಂಗ [ಪಾಠಾಂ. ಣುರಿವಿಂಗ, ಣಪಿಪಿನಂ] ಮುಳ್ಳೊಳಕ್ಕಂ ಗೆಂಟಾಗಿ ಬೀಡಂ ಬಿಡಿಸಿ (ಪಂಪಭಾ. ೫-೪೭ ವ); ಪೊಱೆಲೊಳಾದುಲಿಪುಮಂ ಪಱೆಯ ರವಮುಮಂ . . . ಕೇಳ್ದು (ಧರ್ಮಾಮೃ. ೫-೨೦೭); ಲತಾಂಗೀ ಜನ ದೊಂದು ಮೆಲ್ಲುಲಿಪುಮಂ ಕೇಳ್ದು (ಕಾವ್ಯಸಾ. ೧೧೮); ಗಿಳಿಗಳಂ ಸೋವ ಪಾಮರೀಜಾಳದೊಂದುಲಿಪುಮಂ (ಚಬಪು. ೧೧-೯). **ಉಲಿವು**: ಪಕ್ಷಿ ಗಳ ಉಲಿವು ಕೇಳಬಂದಿತು (ಶಾಂತಲಾ. ೨೬೭); ನಿನ್ನ ಹಳಸದೀ ನಲಿವಿ ನುಲಿವಿನ ಸನಿಹಕೆ (ಗೀಳಿವಿಂ. ೮-೧೧೪). **ಉಲುಪು**: ತಜಗೆಲೆಗಳಂತೆ ಬೆದಱಿ ನೆಲಕ್ಕೆ ಬೀೞ್ವ ಪಕ್ಕಿಗಳುಲುಪುಗಳೊಳಂ (ಕಾದಂಪೂ. ೧೬೦); ವಿಚಾರಿಸಿಕೊಂಡಿಂದು ನೆಗೞ್ದು ಕಂಠದುಲುಪಂ ಕೀರಾಳಿಯೇ (ಉದ್ಧಟ. ೭-೬೩); ಉಲುಪಡಂಗಿದ ವಾದಿಯಂ ನೋಡಿ (ಪದ್ಮರಾ. ೧೧-೧೪೯). **ಉಲುವು**: "ಬಾಯಿ ಸಪ್ಪಳ" (ಜಾನಕೋ. ೨೨); ಗಿಳಿರಾಮ ತವರೂರ ಉತ್ತತ್ತಿ ವನಕ ಉಲುವಿಲ್ಲ (ಜನಗೀ. ೬೨); ನಮಗೂ ಎಂಥಾ ಉಲುವು ಆನಿಸಿತ್ತು (ವೈನಿ. ೧೯೫); ಊರಳಿದು ಉಲುವಡಗಿ ಭೇರಿನಾದವು ನಿಲಲು (ಸಿದ್ದಪು. ೩೮-೩). **ಉಲುಹು**: ಅಳಿದುವೌ ದ್ರೌಪದಿಯ ಸಿರಿಯೆಂ ಬುಲುಹ ಕೇಳುತ ಪಾರ್ಥ ಬಂದನು (ಕುಮ್ಯಾದ್ರೋ. ೨-೩); ಗಂಧೇಭ ಗಮನೆಯರುಗಳು ಅಂದವಡೆದ ಚರಣಾಭರಣಗಳುಲುಹಿಂದಲೈದಿದರಿ ಕ್ಕೆಲದಿ (ಮೋಹತ. ೨೪-೧೫); ಕುಂದದ ಗದ್ಗದದುಲುಹಿಂದ ಸಖಿಯೊಡ ನೆಂದಳು ಮಾಱುತ್ತರವ (ಕಂಸವಿ. ೯-೧೩೪). [ಉಲಿ$_1$ + -ಪು$_1$]

**ಉಲಿಪುಗೇಳ್** (ಕ್ರಿ). ಧ್ವನಿಯನ್ನು ಆಲಿಸು; ಶಬ್ದವನ್ನು ಕೇಳು: ಇಲಿಯುಲಿಪುಗೇಳ್ವ ಬೆಕ್ಕಿನಂತೆ ಬೊಕ್ಕನೆ ಪಾಱಿ ವಾಯ್ದು (ಅರ್ಧನೇ. ೭-೨೯ ವ); ಜಲವಿಹಗಂಗಳೊಳ್ಳುಲಿಪುಗೇಳ್ದು (ಕುಸುಮಾ. ೧-೮೧).

[ಉಲಿಪು + ಕೇಳ್]

**ಉಲಿಪೆ** 'ಉಲುಪೆ' ನೋ.

**ಉಲಿಮಿರಿ** (ನಾ). ಒಂದುಗಿಡ; ಮುದವಸಲೆ: "ವರುಣಃ . . . ಉಲಿ ಮಿರಿ, ಬಸಲೆ" (ಸಿದ್ಧಾಂತಿ. ೧೦೩).

[ದೇ. ‖ ತೆಲು. ಉಲಿಮಿಡಿ, ಉಲಿಮಿರಿ]

**ಉಲಿವ** (ನಾ). ಒಂದು ಬಗೆಯ ಹಕ್ಕಿ: "ಉಚ್ಚಪುಚ್ಛಮಾಮ್ಲಾನಮ ನಲುಲಿವಮಕ್ಕುಂ" (ಮಂಗರಾ. ೫೨-೮). [?]

**ಉಲಿವಕ್ಕಿ** (ನಾ). ಉಲಿಯುವ ಹಕ್ಕಿ: ಪೊರಮಡಿಸಿದುಲಿವಕ್ಕಿಯಮ್ಮ ಸಂಜೆಯೊಳವಂ ಗೂಡುಗೊಳಿಪಂತೆ ಕೂಡಿ (ಗೀಳಿವಿಂ. XV, ೬).

[ಉಲಿ + ಪಕ್ಕಿ$_1$]

**ಉಲಿವು** 'ಉಲಿಪು' ನೋ.

**ಉಲಿಸು$_1$** (ಕ್ರಿ). ನುಡಿಸು ; ಮಿಡಿ; ಮಿಾಟು : ಕಲಿಯೆಜಿಯ ವಸುದೇವ ನಾಕೆಯ ಪೊಳೆವ ವೀಣೆಯು ಕೊಂಡು ತಂತಿಯನುಲಿಸಿ ಕೆಳಗಿರಿಸಿದನು ತರಿಸಿದನುಳಿದ ವೀಣೆಗಳ (ಸಾಳ್ವಭಾ. ೮-೮). [ಉಲಿ$_1$ + -ಇಸು$_3$]

**ಉಲಿಸು$_2$** (ನಾ). ಧ್ವನಿ ; ಸದ್ದು : ಎಲೆ ವೃಷಭ ಗೇಹಪತಿ ಮನವಲಸವೆ ಬಳಿಗಂತು ಗಟ್ಟಿಯಾತ್ಮಕ್ಷೇತ್ರ ಸ್ಥಲಮುಂ ರಕ್ಷಿಸುತಿರ್ದಪನುಲಿಸಿಲ್ಲದೆ ತೊಲಗು ಪೋಗು ಕಾಣದ ಮುನ್ನಂ (ರಸರ. ೧೯೯-೧೬).
[ಉಲಿ$_1$ + -ಇಸು$_4$]

**ಉಲಿಹ** 'ಉಲಿಪ' ನೋ.

**ಉಲುಂಬಲ**, 'ಉರುಂಬಲೆ' ನೋ.

**ಉಲುಂಬಲೆ** 'ಉರುಂಬಲೆ' ನೋ.

**ಉಲುಕಿಸು** (ಕ್ರಿ). ಅಲುಗಿಸು ; ಅಲ್ಲಾಡಿಸು : ಅಳುಕವಾದುದು ಸರಳಪಂಜರಂ ಮತ್ತದರನುಲುಕಿಸುವೆನೆನುತಲದ್ಭುತರೂಪಮುಂ ತಾಳ್ದು ಗಗನಕಂ ಪಾರಿಬಿದ್ದಂ (ತುರಂಗ. ೧೫-೩೬).
[ಉಲುಕು$_1$ + -ಇಸು$_3$]

**ಉಲುಕು$_1$**, ಉಲಕು, ಉಲಿಕು (ಕ್ರಿ). ೧. ಅಲುಗು ; ನಡುಗು ; ಅಲ್ಲಾಡು ; ಮಿಸುಕು : "ಉಲುಕು – ಶರೀರಸ್ಫುರಣೇ" (ಶಮಧಾ); ಉಲುಕಿದರೆ ನಾಲಗೆಯ ತೊಡಬೆಯ ಕಳಚುವೆನು ನಿಲ್ಲೆನುತಲಾ ಕುಂಡಳಿತ ಕಾರ್ಮುಕನೆಚ್ಚು ಕಡಿದನು (ಕುವ್ಯಾಕ. ೧೧-೨೫); ಉಲಿಯದಿರ್ಪುದು ಕೋಕಿ ನಲಿಯದಿರ್ಪುದು ಕೇಕಿಯುಲಕದಿರ್ಪುದು ಕೊಂಚೆಯಲುಕದಿರ್ಪವದಂಚೆ (ಚೆಬಪು. ೩೫-೩೧) ; ನಿನ್ನ ಪಂಚಾಂಗ ಸಾಕು, ನಾನು ಇಲ್ಲಿಂದ ಉಲುಕುವುದಿಲ್ಲ (ಮುಂಬಯಿ. ೫-೪೮). ೨. ಅಳುಕುಂಟಾಗು ; ಶಂಕೆತೋರು : ಗಿಳಿಯ ರೂಪಿನ ಗುಪ್ತಚರನೆಂದುಲುಕುತಿದೆ ಚಿತ್ತದಲಿ ಚಿತ್ತವ ತಿಳುಹೆನಲು ಕಂಡಜಿದು ಬೇಹಿನ ದೂತನಿವನೆಂದು (ತೊರರಾ. ೬-೪-೨೪) ; ತಾನು ಇಂಥಹ ಹೊಲಸು ಕೆಲಸಕ್ಕೆ ಏಕಾದರೂ ಒಪ್ಪಿಕೊಂಡೆನೋ ಎಂದು ಉಲುಕಿದ (ಬೆಂದಜೀ. ೧೯೯).
**ಉಲಕು** : ೧. ನನ್ನ ಸಹಾಯದ ಹೊರತು ಈ ಹುಡುಗನು ಉಲಕಲಿಕ್ಕಿಲ್ಲ (ಮುಂಬಯಿ. ೫-೧೪೭). ೨. ಮನಸು ಉಲಕುತ್ತದೆ (ರೂಢಿ).
**ಉಲಿಕು** : ೧. ನೆನಹಿನೊಳ್ ಬಗೆವೆರ್ಚಿ ಪಂಚಾಮೃತಂ ಮಾಡಿ ಉಲಿಕಿ [ಪಾಠಾಂ. ಅಲುಕಿ]ದೊಡೆ ಪಂಚಾಮೃತಂಗಳಂ ಮಾಡುತುಂ (ರುದ್ರರ. ೫೭-೧೫).

ಉಲುಕಾಡು = ಅಲುಗಾಡು ; ಅಲ್ಲಾಡು ; ಚಲಿಸು : ನಮ್ಮ ಶರೀರವು ನೀರಿಗಿಂತ ಹಗುರಿರುವುದರಿಂದ ಉಲುಕಾಡದೆ ಸುಮ್ಮನೆ ಬಿದ್ದುಕೊಂಡರೇ ಅದು ತೇಲುತ್ತದೆ (ಮುಂಬಯಿ. ೪-೬೧) ; ಒಬ್ಬರಾದರೂ ಬ್ರಾಹ್ಮಣೋತ್ತಮರು ಉಲುಕಾಡುತಾರೇನೋ ನೋಡ್ರಿ (ಹೊ ಸಂ ಸಾ. ೧೦).

[ದೇ. ‖ ತಮಿ. ಉಟ್ಕು, ಉಲುಕ್ಕು ; ಮಲ. ಉಳು ; ತುಳು. ಉಳ್ಕು ; ತೆಲು. ಉಲುಕು]

**ಉಲುಕು$_2$** (ನಾ). ಅದುರುವಿಕೆ ; ಮಿಡಿಕುವಿಕೆ ; ಅದಿರಾಟ : ಅಂಗದೊಳು ನೋವನಕ್ಷಿಯೊಳು ಬೆಳ್ಪಂ ಭಾಳದೊಳು ಬೆಮರನು ಲಲಿತ ಕಂಠದೊಳುಲುಕನಂಘ್ರಿಯೊಳು ಬಿಸಿಯನು . . . ಆರಯ್ದು ಕಾಣದೆ ನೊಂದಳು (ಹಚಕಾ. ೧೨-೨೬).

[< ಉಲುಕು. / ತಮಿ. ಉಲುಕ್ಕು ; ಮಲ. ಉಳಕ್ಕು ; ತುಳು. ಉಲುಕು, ಉಲ್ಕು, ಉಳ್ಕು]

**ಉಲುಕುಮಂತ್ರ**, ಉಳುಕುಮಂತ್ರ (ನಾ). ಉಳುಕನ್ನು ಸರಿಪಡಿಸಲು ಹಾಕುವ ಮಂತ್ರ. **ಉಳುಕುಮಂತ್ರ** : ಅವನಿಗೆ ಉಳುಕು ಮಂತ್ರ ಬರುತ್ತದೆ (ರೂಢಿ). [ಉಲುಕು$_2$ + ಮಂತ್ರ]

**ಉಲುಕುಮಂತ್ರಗಾರ** (ನಾ). ಉಳುಕನ್ನು ಸರಿಪಡಿಸಲು ಮಂತ್ರ ಹಾಕುವವನು : ಉಲುಕುಮಂತ್ರಗಾರನ ಮಂತ್ರದಿಂದ ನನ್ನ ನೋವು ಬಹುಬೇಗ ಕಡಮೆ ಆಯಿತು (ರೂಢಿ).
[ಉಲುಕುಮಂತ್ರ + -ಗಾರ (< -ಕಾಱ)]

**ಉಲುಕೋಚಿ** 'ಉಲಕೋಚಿ' ನೋ.

**ಉಲುಕೋಚಿತನ** 'ಉಲಕೋಚಿತನ' ನೋ.

**ಉಲುಗ**(ನಾ). ದಡ್ಡ ; ಮೂರ್ಖ ; ಬುದ್ಧಿಯಿಲ್ಲದವನು ; ಹುಚ್ಚ(?) : ಡಂಬಕನು ಡಾಳಿಯ ವೃಥಾ ದುಜುದುಂಬಿಗಂ ದುಶ್ಶೀಲಜಾಲಕದಂಬನು ನ್ನತಪಾತಕನು ವಿಶ್ವಾಸಘಾತಕನು ರಂಜಕನು ರಜಹೋಕನುಲುಗನು ನಾಂಬಜಗನೆಂದಿರದೆ ಬಜಿದೆ ನಂಬಿ ನೆಜೆ ಪಕ್ಕಾದಿರಕ್ಕಟ ದುಃಖದುರಿಗೆಂದ (ಮದೇಪು. ೩-೨೫). 'ಉಲುಗಿತಿ' ಪರಾ. [ಉಲು + -ಗ$_3$]

**ಉಲುಗಿತಿ** (ನಾ). ಬುದ್ಧಿಕೆಟ್ಟವಳು ; ಹುಚ್ಚಿ (?): ಊರಿಗೆ ಹೋಗುವ ದಾರಿಯೊಳಗೊಬ್ಬ ಉಲುಗಿತಿ ಮನೆಯ ಮಾಡಿಕೊಂಡು ದಾರಿಗೊಂಡು ಹೋಗುವಯ್ಯಗಳ ಬಾರಿಭೋ . . . ಎನ್ನುತ್ತಿದ್ದಾಳೆ (ಸಿದ್ಧೇವ. ೧೪೯) ; "ಉಲುಗಿತಿ ಎನೆ ತನುಕರಣೇಂದ್ರಿಯ ಜಾಲಗಳನ್ನುಳ್ಳ ಮಾಯಾಂಗನೆ" (ಸಿದ್ಧೇವ. ಟೀಕೆ). [ಉಲುಗ + -ಇತಿ$_1$ (< -ಇತ್ತಿ)]

**ಉಲುಗುಲುಗುಪ್ಪಂಡೆ** (ನಾ). ಒಂದು ಬಗೆಯ ಆಟ : ತಪ್ಪದೆ ಬಾಲಕೇಳಿಯೊಳು ಮೇಗುಲುಗುಲುಗುಪ್ಪಂಡೆಯ ಹೂಡಿದಂತೆ ಒಪ್ಪವಡೆದ ಹಿಮದಿಂಡೆಗಳೆಸೆದುವು ಪುಷ್ಪಬಾಣನ ಕಣ್ಮನಕೆ (ಮೋಹತ. ೬-೫೦). [?]

**ಉಲುಪಿ$_1$** 'ಉಲುಪೆ' ನೋ.

**ಉಲುಪಿ$_2$** (ನಾ). ಒಂದು ಬಗೆಯ ಮಿಾನು (ಕ). [?]

**ಉಲುಪು$_1$** 'ಉಲಿಪು' ನೋ.

**ಉಲುಪು$_2$** 'ಉಲುಪೆ' ನೋ.

**ಉಲುಪೆ**, ಉಲಪಿ, ಉಲುಪಿ$_1$, ಉಲುಪು$_2$, ಉಳುಪೆ(ನಾ).(ಮದುವೆ ಅಥವಾ ಪ್ರಯಾಣದ ಸಂದರ್ಭಗಳಲ್ಲಿ) ಉಚಿತವಾಗಿ ಕೊಡುವ ಆಹಾರ ಸಾಮಗ್ರಿಗಳು ; ಭತ್ಯ ; ಕಾಣಿಕೆ : ಹುಲ್ಲು ಉಲುಪೆ ಉಡುಗೊಜೆ ಬಿಟ್ಟು ಕೊಟ್ಟಣ (ಸೌಇಇ. IX–ii, ೪೪೦-೨೬ ; 1419) ; ಕುಮಾರರು ದಿಕ್ಕುದಿಕ್ಕಿಂದ ಸಾರವಸ್ತುಗಳುಲುಪೆಯ ಕಳುಹಿದರವನಾರೈವುತಿರ್ದಳಾ ಜನನಿ (ಭರಚ. ೧೯-೪೬) ; ಊರೂರ್ಗಳಿಂ ತರ್ಪುಲುಪೆಗಳ ಪಣ್ಕಾಯ್ಕಬ್ಬಿನಳನೀರ್ಗಳಂ ಕಸನೆಂದು ಮಾಣಿಸಿ (ಚಿಕವಂ. ೭-೧೬) ; ಊರುಗರು ತಂದೊಪ್ಪಿಸಿದ ನವಸಾರ ಫಲದುಲುಪೆಯೊಳು ಪಥಸಂಚಾರವೇ ನಂದನವಿಹಾರವದೆನಿಸಿತಾತಂಗೆ (ಅಜಚ. ೧-೭). **ಉಲಪಿ** : ಅವರ ಊಟ ಉಡಿಗೆಯ ಸಲುವಾಗಿ ದಿನಾಲು ಉತ್ತಮ ಸಾಮಾನುಗಳ ಉಲಪಿಯು ಹೊತ್ತುಹೊತ್ತಿಗೆ ಸಿಗುವಂತೆ . . . ವ್ಯವಸ್ಥೆ ಮಾಡಿದ್ದರು (ಛತ್ರಪ. ೧೧೭). **ಉಲುಪಿ$_1$** : ಇನಿತುಲುಪಿಗಳೇಕೆ ಮಾಮಾಜಿ (ಜನರಾ. ೯-೧೧೧). **ಉಲುಪು$_2$** : ಉಡುಗರೆ ಉಲುಪು ಮನೆದೆರೆ (ಮೈಆರಿ. ೧೯೩೪, ೫೮-೨೪ ; 1430)./ **ಉಳುಪೆ** : ಸ್ಥಳಕ್ಕೆ ಕರಸಿಕೊಂಡು ಉಳುಪೆ ಮುಂತಾದ್ದು ಕಳುಹಿಸಿಕೊಟ್ಟು (ಕೆಳವಂ. ೧೦-೫).

[?. / ಹಿಂ. ಉಲೂಫ್. / ತಮಿ. ಉಲುಪ್ಪೈ; ತುಳು. ಒಲಿಪೆ; ತೆಲು. ಉಲುಪ, ಉಲುಪಾ]

**ಉಲುಬು** (ಕ್ರಿ). ಅಲುಗಿಸು; ಅಲ್ಲಾಡಿಸು ; ಉದಿರಿಸು : ಎಲವೊ ಮಡಿವಳ ನಿನ್ನ ತೊಳಹವು ಚೆಲುವನಾದುವು ನಮ್ಮ ಯಮುನೆಯಲುಲುಬಿ ತೊಳೆದೊಡೆ ಕಪ್ಪಡವು ಬೆಳ್ಪಡಗಳಾಗದಿವೆ ತೊಳೆದುಕೊಡು ನಾವುಟ್ಟುವದನು ನೀ (ಸಾಳ್ವಭಾ. ೧೨-೨೮). ℙ ಇದು 'ಅಲುಬು' ಎಂಬುದರ ರೂಪಾಂತರವಿರಬಹುದೆ? [ದೇ. ‖ ತಮಿ. ಉಲುಪ್ಪು. ತೆಲು. ಉಲುಪು]

**ಉಲುವು** 'ಉಲಿಪು' ನೋ.

**ಉಲುಹು** 'ಉಲಿಪು' ನೋ.

**ಉಲುಹುಗೆಡು** (ಕ್ರಿ). ಧ್ವನಿಯಡಗು ; ನಿಶ್ಶಬ್ದವಾಗು : ಬಳಸಿ ಬರೆಯಲು ಕಂಠಪತ್ರದವುಲುಹುಗೆಡದಗ್ಗಳಿಕೆಯೆಂಬೀ ಬ ಲು ಹು ಗದುಗಿನ ವೀರನಾರಾಯಣನ ಕಿಂಕರಗೆ (ಕುವ್ಯಾಅ. ೧–೧೫).
[ಉಲುಹು (< ಉಲಿಪು) + ಕೆಡು]

**ಉಲುಹುದೆಗೆ** (ಕ್ರಿ). ಶಬ್ದವಿಲ್ಲವಾಗು; ಅಬ್ಬರವಿಲ್ಲವಾಗು : ಉಲುಹು ದೆಗೆದಿಂಗುವ ಸಮುದ್ರದ ಸಲಿಲದವೊಲಾಯ್ತಖಿಳ ಸೇನಾಜಲಧಿ (ತೊರರಾ. ೧–೧೭–೫). [ಉಲುಹು (< ಉಲಿಪು) + ತೆಗ್$_1$]

**ಉಲೂಕ, ಉಳೂಕ** (ನಾ). ೧. ಗೂಗೆ; ಗೂಬೆ: ಅಡಗಿನ ಬಸಿಗೆ ಬಂದೆಜಗಿದವುಲೂಕಧ್ವಾಂಕ್ಷ ಸಂದೋಹ (ಕುವ್ಯಾಭೀ. ೪–೪೫). ೨. ಒಬ್ಬ ರಾಕ್ಷಸನ ಹೆಸರು: ಅಂದು ಮಹವಾಹವಕೆ ನಡೆದುದು ಕಟಕವಲ್ಲಿಯುಲೂಕನೆಂಬವನು (ಕುವ್ಯಾಭೀ. ೧–೫೭). ೩. ಒಂದು ನರಕದ ಹೆಸರು : ಸರ್ಪ ಕೂರ್ಮ ವಾಯಸ ಗೃಧ್ರ ಉಲೂಕವೆಂಬೈದು ಮಂತ್ರಿ ನರಕಂಗಳಿಂ (ವಿವೇಕ. ೧೮೦). **ಉಳೂಕ** : ೧. ಕಾಕೋಳೂಕಸೃಗಾಳ ಬಳಾಕೋಷ್ಟ್ರ ಚಮೂರು (ಸುಕುಮಾ. ೧೧–೪೧ ವ). [ಸಂ.]

**ಉಲೂಖ** (ನಾ). = ಉಲೂಖಲ : ತನ್ನ ಕಾಯಮುಂ ಘನಶಿಲೋಲೂಖದೊಳಗಿಟ್ಟು ಮುಸಲದೊಳೊಲ್ದು (ಆರಾಚ. ೯–೨೦).
[< ಸಂ. ಉಲೂಖಲ]

**ಉಲೂಖಲ** (ನಾ). ಒರಳು : ಗೋಪಿ . . . ದೃಢವಾಗಲುಲೂಖಲದಲ್ಲಿ ಕಟ್ಟ (ಜಗವಿ. ೩–೩೬); ಉಲೂಖಲದ ಸೋಮವಲ್ಲಿಯ ಮುಸಲದ ಮಖ ಶಾಲೆ ಕಣ್ಗೆಸೆದುದು (ಜೈಮಿಭಾ. ೩೩–೩೮). [ಸಂ.]

**ಉಲ್ಕ, ಉಲ್ಕೆ, ಉಳ್ಕ, ಉಳ್ಕೆ** (ನಾ). ೧. ಆಕಾಶದಿಂದ ಕೆಳಕ್ಕೆ ಬೀಳುವ ತೇಜಃಪುಂಜವಾದ ವಸ್ತು : ಗಗನದಿಂ ಬೀೞ್ತರ್ಪುಲ್ಕಮುಂ ಕಂಡು (ಪಂರಾಮಾ. ೧೬–೪೨ ವ). **ಉಲ್ಕೆ** : ಗಗನದೊಳುಲ್ಕೆ ಬೀಳ್ವವೊಲು ನೋಡಲು ನೋಡಲಡಂಗಿ ಪೋಪ ಸೋಜಿಗದ ಚಮತ್ಕೃತಿ (ಶತಕ. ೧೮೭–೬೯); ಉಲ್ಕೆಯಂತೆ ಆಕಾಶಕ್ಕೆ ಹಾರಿ ಮಾಯವಾಯಿತು (ವಚಭಾ. ೩೫೮). ೨. ಉರಿಯುವ ಕೊಳ್ಳಿ, —ಪಂಜು : ನೂರಾರು ಉಲ್ಕೆಗಳ ಬೆಳಕಿನಲ್ಲಿ ಒಂದು ವಿಶಾಲ ಜನಸಮೂಹ ನೃತ್ಯಗಾನವಾದ್ಯಗಳಿಂದ ದಿಙ್ಮಂಡಲವನ್ನು ಮುಖರಿತಗೊಳಿಸುತ್ತಿತ್ತು (ಬಾಣಅ. ೩೦೮). **ಉಳ್ಕ** : ೧. ಆಗಳ್ ಪ್ರಳಯದುಳ್ಕಮುಳ್ಕುವಂತೆ ತನ್ನೆಚ್ಚಂಬು ಮುನಿಕುಮಾರನ ಕಣ್ಣೊಳವೆರ್ದೆಯೊಳಮುಳ್ಕೆ (ಪಂಪಭಾ. ೧–೧೧ ವ); ಬಾಳುಡಿ ಪಾಱಿ ಬೀೞ್ವ ಪಗಲುಳ್ಕದವೋಲ್ (ಪಂರಾಮಾ. ೧೩–೬೩). **ಉಳ್ಕೆ$_2$** : ಧುಮ್ಮಿಕ್ಕಿದನು ಧರೆಗೆ ಸೌಮಿತ್ರಿ ತಾನುಳ್ಕೆಯೊಲ್ (ಶ್ರೀರಾಮಾ. ೧೫೮–೧೭೬).
[< ಸಂ. ಉಲ್ಕಾ]

**ಉಲ್ಕಾಪಾತ** (ನಾ). ಆಕಾಶದಿಂದ ತೇಜಃಪುಂಜವಾದ ವಸ್ತು ಕೆಳಕ್ಕೆ ಬೀಳುವುದು : ಅಗಸದೊಳೊಗೆವ ಧೂಮಕೇತುಗಳಂ ವಿಜಯಕೇತುಗಳೆಂದುಂ ಕಣ್ಣೊಳುಳ್ಕುವುಲ್ಕಾಪಾತಮುಂ ನಿಜಪ್ರತಾಪಾನಲಸ್ಫುಲಿಂಗಂಗಳೆಂದುಂ (ಪಂರಾಮಾ. ೧೪–೧೨೮ ವ); ಆಕಾಶದಲ್ಲಿ ಮಿಂಚಿನಂತೆ ಒಂದುಕ್ಷಣ ಪ್ರಕಾಶಮಾನವಾಗಿ ಕಾಣುತ್ತದೆ. ಆಗ ಅವನ್ನು 'ಉಲ್ಕಾಪಾತ' ವೆಂದು ಕರೆಯುತ್ತಾರೆ (ಆಕಾಶ. ೩೮).
[ಸಂ. (ಉಲ್ಕಾ + ಪಾತ)]

**ಉಲ್ಕಾಮುಖ** (ನಾ). ಒಂದು ಬಗೆಯ ಆಯುಧ : ಬಿಲ್ಲು ತೀರು . . . ಉಲ್ಕಾಮುಖ . . . ಸಾಧನ ವಿಶೇಷಂಗಳ್ (ವಿವೇಕ. ೨೬೨).
[ಸಂ. (ಉಲ್ಕಾ + ಮುಖ)]

**ಉಲ್ಕೆ** 'ಉಲ್ಕ' ನೋ.

**ಉಲ್ಟಾ, ಉಲ್ಟಿ, ಉಳ್ಟಾ** (ನಾ). ೧. ಎದುರುಮುಖ ; ವಿರುದ್ಧವಾದ ದಿಕ್ಕು ; ತಲೆಕೆಳಗು. ೨. (ಉಕ) ವಾಂತಿ. ೩. ಅಂಗಿಯ ಒಳಮೈ (ಕ). **ಉಲ್ಟಿ** : ೨. (ಉಕ). **ಉಳ್ಟಾ** : ೧. ಉಳ್ಟಾ ಸೀದಾ ವಿಷಯ (ಚೆಂಗೂಲಿ. ೧೪).

ಉಲ್ಟಾಪಲ್ಟಿ = ಅಸ್ತವ್ಯಸ್ತ ; ತಲೆಕೆಳಗು : ಅವನು ಪರೀಕ್ಷೆಯಲ್ಲಿ ಉಲ್ಟಾಪಲ್ಟಿ ಹೊಡೆದಿದ್ದಾನೆ (ರೂಢಿ).
[←ಮರಾ. ಉಲಟ, ಉಲಟಾ, ಉಲಟೀ; ಹಿಂ. ಉಲಟಾ, ಉಲಟೀ]

**ಉಲ್ಟಿ** 'ಉಲ್ಟಾ' ನೋ.

**ಉಲ್ಪ** (ನಾ). = ಉಲ್ಬ : ಜಲ್ಪಿಸಲು ಆರುದಿಂಗಳಾದಿಯದುಲ್ಪ ನವಮಾಸಾಂತ್ಯ ಸುರಪತಿ ಕಲ್ಪಿಸುವ ನವರತ್ನವೃಷ್ಟಿಯ ಮೂರು ಸಂಜೆಯಲೀ (ಬಿಜ್ಜಪು. ೯–೩೬). [< ಸಂ. ಉಲ್ಬ]

**ಉಲ್ಬ** (ನಾ). ಜರಾಯು ; ಮಾಸು ; ಕಸ : "ಕೂಸಿರ್ಪ ಚೀಲಂ ಜರಾಯುವೆನಿಕ್ಕುಮಾ ತಟದು ಗಲ್ಲೆ ಉಲ್ಬಮೆನಿಕ್ಕು" (ಮಂಗರಾ. ೯೧–೮).
[ಸಂ.]

**ಉಲ್ಬಣ** (ಗು). ೧. ತೀವ್ರವಾದ; ಉಗ್ರವಾದ; ಅತಿರೇಕದ; ಹೆಚ್ಚಿನ: ಉಲ್ಬಣ ನಿರರ್ಗಳ ವೃತ್ತಿಯಿಂದೆಸೆವ ಪಣಗಣದಿನಣಿಯರಮವಂ ನಗುತೆ ಪರದರೊಪ್ಪಿದರಾ ವಿಪಣಿಯೊಳು (ಪದ್ಮರಾ. ೮–೩೭). (ನಾ). ೨. ತೀವ್ರತೆ ; ಅತಿಶಯ ; ಅತಿರೇಕ : ಆಕ್ರೋಶದುಲ್ಬಣದೊಳಂದು ನಾಂ ತಮ್ಮನ ವಿನಯಮಂ ಕಿವುಳ್ಗೆಳ್ದು (ಶ್ರೀರಾಮಾ. ೩೦೯–೨೯೬). ೩. ರಾಶಿ ; ಮೆದೆ : ಅಂಗದಂಗದಿ ಪೊಸಕಂಡದಿಂಡೆನೆಣದುಲ್ಬಣ ಮಂತ್ರದ ಮಂತಣಂ (ರಾಜಶೇ. ೬–೭೯).

ಉಲ್ಬಣವಾಗು = ತೀವ್ರವಾಗು ; ಉಗ್ರವೆನಿಸು : ಅವರಲ್ಲಿ ಮೊದಲೇ ಇದ್ದ ಪಿತ್ತವಿಕಾರ ಇದ್ದಕಿದ್ದಂತೆ ಉಲ್ಬಣವಾಯಿತು (ಜಿಸ್ತಕ. ೧೧೪). [ಸಂ.]

**ಉಲ್ಬಣಗೊಳ್** (ಕ್ರಿ). ತೀವ್ರವಾಗು ; ಉಗ್ರವೆನಿಸು. 'ಉಲ್ಬಣಗೊಳಿಸು' ಪರಾ. [ಉಲ್ಬಣ + ಕೊಳ್$_1$]

**ಉಲ್ಬಣಗೊಳಿಸು** (ಕ್ರಿ). ತೀವ್ರಗೊಳಿಸು ; ಉಗ್ರವಾಗಿಸು : ಅವಳ ಭ್ರಮೆಯನ್ನು ಮತ್ತಷ್ಟು ಉಲ್ಬಣಗೊಳಿಸುವ ಘಟನೆಯೊಂದು ನಡೆಯಿತು (ಪದ್ಮಸ. ೮೦). [ಉಲ್ಬಣಗೊಳ್ + -ಇಸು$_3$]

**ಉಲ್ಬಣಸ್ಥಿತಿ** (ನಾ). ತೀವ್ರವಾದ ಸ್ಥಿತಿ; ಉಗ್ರವಾದ ಪರಿಸ್ಥಿತಿ: ತಾಯಿ ಮಗಸುಲ್ಬಣಸ್ಥಿತಿಗೆ ಕಡಿದು ಕಾತರೆಯಾಗಿ (ಶ್ರೀರಾಮಾ. ೧೯–೫೧೫). [ಉಲ್ಬಣ + ಸ್ಥಿತಿ]

**ಉಲ್ಬಣಾವಸ್ಥೆ** (ನಾ). = ಉಲ್ಬಣಸ್ಥಿತಿ : ಉಲ್ಬಣಾವಸ್ಥೆಗೆ ಮುಟ್ಟಿದಾಗ ತಮ್ಮ ನಡೆನುಡಿಗಳ ಮೇಲೂ ವರ್ತನೆಯ ಮೇಲೂ ನಿಯಂತ್ರಣ ತಪ್ಪಿ ಮನೋರೋಗದ ಚಿಕಿತ್ಸಾಲಯಕ್ಕೆ ಸೇರುವ ಸ್ಥಿತಿಗೆ ಬರುವರು (ಶಿಕ್ಷದ. ೬೬೮). [ಉಲ್ಬಣ + ಅವಸ್ಥೆ]

**ಉಲ್ಬಣಿಸು** (ಕ್ರಿ). ತೀವ್ರವಾಗು ; ಉಗ್ರವಾಗು : ತಲವನಪುರದ ಅರಸನ ಸಲ್ಲದ ಮಾತುಗಳನ್ನು ಕೇಳಿ ಕೇತಮಲ್ಲನಿಗೆ ಸಿಟ್ಟು ಉಲ್ಬಣಿಸಿಬಂತು (ಶಾಂತಲಾ. ೧೪೨). [ಉಲ್ಬಣ + -ಇಸು$_3$]

**ಉಲ್ಮುಕ** (ನಾ). ಉರಿಯುವ ಕೊಳ್ಳಿ : "ಅಲಾತಂ, ಉಲ್ಮುಕಂ – ಈ ೨ ಕೊಳ್ಳಿ" (ಹಲಾಯು. ೧೨–೬೭). [ಸಂ.]

**ಉಲ್ಲಂಗಿ** (ನಾ). ಒಂದು ಪಕ್ಷಿ : "ಉಲ್ಲಂಗಿ– ಚೋಟುಮೂಗಿನ ಗೇಣುದ್ದಗರಿಯ ಹಕ್ಕಿ ; ಹಾರುಬುರುಕ" (ಜಾನಕೋ. ೨೨). [?]

**ಉಲ್ಲಂಘನ** (ನಾ). ೧. ದಾಟುವುದು ; ಹಾರುವುದು. ೨. ಮೀರುವುದು ; ಅತಿಕ್ರಮಣ : ಪಾಟಿಯಲ್ತು ಪಿತೃವಾಕ್ಯೋಲ್ಲಂಘನಂ ರಾಘವಾ (ಪಂರಾಮಾ. ೬–೮೨). [ಸಂ.]

